# ಕುಂತಣಬಾಗೆ : ಒಂದು ಸಾಂಸ್ಕೃತಿಕ ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ

ಸಂಶೋಧಕರು

**ಶ್ರೀ ಎಂ. ಪಿ. ಕಂಬಿಕಾರ** ಎಂ.ಎ.

ಮಾರ್ಗದರ್ಶಕರು

**ಡಾ. ಬಸವರಾಜ ಎನ್. ಅಕ್ಕಿ**

ಸರ್ಕಾರಿ ಪ್ರಥಮದರ್ಜೆ ಕಾಲೇಜು, ಅಳ್ನಾವರ





ಚರಿತ್ರೆ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೨೦೦೮

# ಕುಂತಣಬಾಗೆ : ಒಂದು ಸಾಂಸ್ಕೃತಿಕ ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ

ಸಂಶೋಧಕರು

ಶ್ರೀ ಎಂ. ಪಿ. ಕಂಟಿಕಾರ



ಮಾರ್ಗದರ್ಶಕರು

ಡಾ. ಬಸವರಾಜ ಎನ್. ಅಕ್ಕಿ

ಸರ್ಕಾರಿ ಪ್ರಥಮದರ್ಜೆ ಕಾಲೇಜು, ಅಳ್ನಾವರ





ಚರಿತ್ರೆ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

೨೦೦೮

# ದೃಢೀಕರಣ ಪತ್ರ

ಶ್ರೀ ಮಾಯಪ್ಪಾ. ಪ್ರಭು. ಕಂಟಿಕಾರ ಇವರು **ಕುಂತಣಬಾಗೆ : ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗಕ್ಕೆ **ಎಂ. ಫಿಲ್.** ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಮತ್ತು ಈ ಮೊದಲು ಎಲ್ಲಿಯೂ ಇಡಿಯಾಗಿ ಇಲ್ಲವೇ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಬಸವರಾಜ ಎನ್. ಅಕ್ಕಿ.**
ಮಾರ್ಗದರ್ಶಕರು
ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ
ಹಾರೂಗೇರಿ

ಸ್ಥಳ : ಹಾರೂಗೇರಿ
ದಿನಾಂಕ : ೦೪- ೧೦ -೨೦೦೮

# ಘೋಷಣಾ ಪತ್ರ

**ಕುಂತಣಬಾಗೆ : ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಶೋಧನ ಸಂಪ್ರಬಂಧವನ್ನು ಡಾ. ಬಸವರಾಜ ಎನ್. ಅಕ್ಕಿ., ಬಿ.ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

**ಶ್ರೀ ಎಂ.ಪಿ. ಕಂಟಿಕಾರ**
ಸಂಶೋಧನ ವಿದ್ಯಾರ್ಥಿ
ಬಿ.ಆರ್. ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ

ಸ್ಥಳ : ಹಾರೂಗೇರಿ
ದಿನಾಂಕ : ೦೪-೧೦-೨೦೦೮

## ಅಂತರಾಳದಿಂದ...

''ಅನ್ನದಾನಂ ಪರಂದಾನಂ, ವಿದ್ಯಾದಾನ ಪರಮತ ಅನ್ನೇನಾ ಕ್ಷಣಿಕಾ, ಯಾವಜ್ಜೀವಂ ಚ ವಿದ್ಯೆಯಾ॥

ಅನ್ನದಾನವು ಶ್ರೇಷ್ಠ ದಾನ, ವಿದ್ಯಾದಾನವು ಅದಕ್ಕಿಂತಲೂ ಶ್ರೇಷ್ಠ. ಅನ್ನದಾನದಿಂದ ಕ್ಷಣಿಕವಾದ ತೃಪ್ತಿ ಸಿಕ್ಕರೆ, ವಿದ್ಯೆಯಿಂದ ಜೀವ ಇರುವತನಕ ತೃಪ್ತಿ ಸಿಗುತ್ತದೆ. ಇಂತಹ ವಿದ್ಯೆಯನ್ನು ಪಡೆದ ವಿದ್ಯಾಪೀಠವನ್ನು ಮತ್ತು ವಿದ್ಯೆಯನ್ನು ನೀಡಿದ ವಿದ್ಯಾಗುರುಗಳನ್ನು ಸ್ಮರಿಸುವುದು ನನ್ನ ಕರ್ತವ್ಯವೆಂದು ಬಯಸುತ್ತೇನೆ. ವಿದ್ಯಾಪೀಠಕ್ಕೆ ಮತ್ತು ನನ್ನ ವಿದ್ಯಾಗುರುಗಳಿಗೆ ನಾನೆಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಸಾಲದು...

☞ ಅಧ್ಯಯನದ ಸಂದರ್ಭದಲ್ಲಿ ನನ್ನ ಮಾರ್ಗದರ್ಶಕರಾದ ಡಾ. ಬಿ.ಎನ್.ಅಕ್ಕಿ ಗುರುಗಳು, ನನ್ನ ಸಂಶೋಧನೆಯ ಎಲ್ಲಾ ಹಂತಗಳಲ್ಲಿಯೂ ಆತ್ಮೀಯವಾಗಿ ಸೂಕ್ತ ಸಲಹೆ ಸೂಚನೆಗಳನ್ನಿತ್ತು. ಸಮರ್ಥ ರೀತಿಯಲ್ಲಿ ಮಾರ್ಗದರ್ಶನ ಮಾಡಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

☞ ನಾನು ಈ ಸಂಪ್ರಬಂಧವನ್ನು ಬರೆದು ಮುಗಿಸುವಲ್ಲಿ ಶ್ರೀ ಚನ್ನವೃಷಭೇಂದ್ರ ಶಿಕ್ಷಣ ಸಂಸ್ಥೆಯ ಪದವಿ ಮಹಾವಿದ್ಯಾಲಯದ ಪ್ರಾಧ್ಯಾಪಕರಾದ ಪ್ರೊ. ಜಿ.ಆರ್.ಗುಡೋಡಗಿ, ಪ್ರೊ. ಪಿ.ಬಿ.ಕಲಚಿಮ್ಮಡ, ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರದ ನಿರ್ದೇಶಕರಾದ ಡಾ.ವಿ.ಎಸ್.ಮಾಳಿ ಹಾಗೂ ಸಂಚಾಲಕರಾದ ಡಾ. ಆರ್.ಬಿ. ಚಿಲಮಿ ಈ ಸಂಸ್ಥೆಯ ಸಿಬ್ಬಂದಿವರ್ಗಕ್ಕೆ.....

☞ ನಾನು ವರದಿಯ ರಚನೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಹಂಪಿ, ಮೈಸೂರು, ಬೆಂಗಳೂರು, ಬಿಜಾಪುರ, ಕೆ.ಆರ್.ಆಯ್. ಧಾರವಾಡ, ಪ್ರಸ್ತುತ ಹಂಪಿ ವಿಶ್ವವಿದ್ಯಾಲಯದ ಶಾಖಾ ಸಂಸ್ಥೆಯಾದ ಶ್ರೀ ಬಿ.ಆರ್.ದರೂರ ಸಂಶೋಧನಸಂಸ್ಥೆ ಹಾಗೂ ಗ್ರಂಥಾಲಯದ ಪಾಲಕರಿಗೂ, ಸಿಬ್ಬಂದಿಯವಗೆ...

☞ ನಾನು ಈ ವರದಿಯ ರಚನೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಾಗೂ ಕನ್ನಡ ಸಂಶೋಧನ ಸಂಸ್ಥೆಯ ಗ್ರಂಥಾಲಯದ ಸಹಾಯವನ್ನು ಪಡೆದಿದ್ದೇನೆ. ಆಯಾ ಗ್ರಂಥಗಳ ಲೇಖಕರಿಗೂ ಹಾಗೂ ಗ್ರಂಥಾಲಯದ ಸಿಬ್ಬಂದಿಯವರಿಗೂ..

☞ ನನ್ನ ನಿರಂತರ ಏಳಿಗೆಯನ್ನು ಬಯಸುತ್ತಿರುವ ನನ್ನ ಪೂಜ್ಯ ತಂದೆ-ತಾಯಿಯರಾದ ಶ್ರೀ ಪ್ರಭು. ಮಹಾದೇವ. ಕಂಟಿಕಾರ ಮತ್ತು ಶ್ರೀಮತಿ ಸತ್ಯವ್ವ ಪ್ರಭು. ಕಂಟಿಕಾರ, ಅದೇ ರೀತಿ ಹೆಜ್ಜೆ ಹೆಜ್ಜೆಗೂ ಮಾರ್ಗದರ್ಶನ, ಸಲಹೆ ನೀಡುತ್ತಲೇ ಬಂದಿರುವ ಶ್ರೀ ಕೆಂಚಪ್ಪ. ಲಕ್ಕಪ್ಪ. ಬೆಳಗಲಿ, ಶ್ರೀ ಯಲ್ಲಪ್ಪ. ಬಾ. ಪೂಜೇರಿ, ಶ್ರೀ ಸಂಕಪ್ಪ ಶೆಟ್ಟಪ್ಪ. ಜಂಬಗಿ, ಡಾ. ಎಸ್.ಬಿ. ಪಾರ್ಥನಳ್ಳಿ, ಡಾ. ಸುರೇಶ ದೊಡ್ಡಮನಿ, ಅತ್ಯಂತ ಆತ್ಮೀಯ, ಹೃದಯಸ್ಪರ್ಶಿ ಜನ್ಮ ಜನ್ಮಾಂತರಗಳ ಪೂಜ್ಯನೀಯ ಫಲವೇನು ಎನ್ನುವಂತೆ ನನಗೆ ಒದಗಿ ಬಂದಿರುವ ಶ್ರೀ ಬಿ.ಎಲ್.ಘಂಟಿ(ಪಾಟೀಲ). ನನ್ನ ಕ್ಷೇತ್ರವರದಿ(ಪ್ರಬಂಧ)ವನ್ನು ತಯಾರಿಸಲು ತನು-ಮನದಿಂದ ಸಹಾಯ ಮಾಡಿದ ಪ್ರಸ್ತುತ ನಾನು ಸೇವೆ ಸಲ್ಲಿಸುತ್ತಿರುವ ಶ್ರೀ ಚೆನ್ನಬಸವೇಶ್ವರ ವಿದ್ಯಾವರ್ಧಕ ಸಂಘದ ಪದವಿಪೂರ್ವ ಮತ್ತು ಪದವಿ ಮಹಾವಿದ್ಯಾಲಯದ ಅಧ್ಯಕ್ಷರಾದ ಡಾ. ಸಿ.ಬಿ.ಕುಲಿಗೋಡ ಮತ್ತು

ಆಡಳಿತ ಮಂಡಳಿ ಸದಸ್ಯರು, ಸಿಬ್ಬಂದಿವರ್ಗ ಹಾಗೂ ವಿದ್ಯಾರ್ಥಿವೃಂದ. ತಮ್ಮ ಕುಟುಂಬದ ಸದಸ್ಯನಂತೆಯೇ ಪರಿಗಣಿಸಿ, ಪ್ರತಿಯೊಂದು ಕಾರ್ಯದಲ್ಲಿ ಬೆನ್ನೆಲುಬಾಗಿ ನಿಂತು ಪ್ರೋತ್ಸಾಹಿಸುತ್ತಿರುವ ನನ್ನ ಅಕ್ಕನವರಾದ ಶ್ರೀಮತಿ ಲಕ್ಕವ್ವಾ ಕೆಂಚಪ್ಪ. ಬೆಳಗಲಿ, ನನ್ನ ತಂಗಿಯಾದ ಶ್ರೀಮತಿ ಚಂದ್ರವ್ವ. ನಿಂಗಪ್ಪ. ಬನಾಜ, ನನ್ನ ಅಜ್ಜಿಯಾದ ಶ್ರೀಮತಿ ಮಾಯವ್ವ. ಸಂಕಪ್ಪಾ. ಜಂಬಗಿ, ನನ್ನ ಮಾವನವರಾದ ಶ್ರೀ ದುಂಡಪ್ಪಾ. ಲಕ್ಕಪ್ಪಾ. ಬೆಳಗಲಿ, ಶ್ರೀ ನಿಂಗಪ್ಪಾ ಭೀ. ಗಲಗಲಿ, ಬೆಳಗಲಿ, ಗಲಗಲಿ ಬಂಧುಗಳು ಹಾಗೂ ಹಿಡಕಲ್ಲ ಗ್ರಾಮದ ಸಮಸ್ತ ಗುರು-ಹಿರಿಯರಿಗೂ, ನನ್ನ ಅಧ್ಯಯನಕ್ಕೆ ಸಹಕರಿಸಿದ ಎಲ್ಲರಿಗೂ...

- ☞ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಹಕರಿಸಿದ ಕುಂತಣಬಾಗೆಯ ಪ್ರದೇಶದ ಎಲ್ಲ ಹಿರಿಯರಿಗೂ, ಅಧಿಕಾರಿಗಳಿಗೆ..
- ☞ ಸಂಪ್ರಬಂಧವನ್ನು ಗಣಕೀಕೃತಗೊಳಿಸಿಕೊಟ್ಟ ಮಹಾಗಣಪತಿ ಕಂಪ್ಯೂಟರ್ಸ್, ಶ್ರೀನಗರ, ಧಾರವಾಡ ಹಾಗೂ ಅಂದವಾಗಿ ಬೈಂಡಿಂಗ್ ಮಾಡಿಕೊಟ್ಟ ಬಿರಾದಾರ್ ಅವರಿಗೆ....

ಹೃತ್ಪೂರ್ವಕ ವಂದನೆಗಳು.

ಸ್ಥಳ : ಹಾರೂಗೇರಿ
ದಿನಾಂಕ : ೦೪-೧೦-೨೦೦೮

ಶ್ರೀ ಎಂ. ಪಿ. ಕಂಟಿಕಾರ.
ಸಂಶೋಧನ ವಿದ್ಯಾರ್ಥಿ

# ಪರಿವಿಡಿ

## ಅಧ್ಯಾಯ : ಒಂದು

# ಪ್ರಸ್ತಾವನೆ, ಆಕರಗಳು, ಉದ್ದೇಶ ಹಾಗೂ ವ್ಯಾಪ್ತಿ

### ಪ್ರಸ್ತಾವನೆ :

ಒಂದು ನಾಡು ಎಂದರೆ ಅದನ್ನು ಆಳಿದ ಜನರು ಅಲ್ಲ, ಅಲ್ಲಿ ಬದುಕಿದ ಜನ. ಹೀಗೆ ಬದುಕಿದ ಜನರ ಒಂದು ಗಣನೀಯವಾದ ಭಾಗವೇ ಆ ನಾಡನ್ನಾಳಿದ ರಾಜ. ಒಂದು ಪ್ರದೇಶದ ನಿಜವಾದ ಚರಿತ್ರೆಯೆಂದರೆ ಆ ಜನತೆಯ ಚರಿತ್ರೆ. ಅವರು ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಸಂಸ್ಕೃತಿ, ಸಂಪ್ರದಾಯಗಳು ಮತ್ತು ಅವರ ಮೌಲ್ಯಗಳನ್ನೊಳಗೊಂಡ ಜೀವನದ ವಿವರಣೆಯೇ ಚರಿತ್ರೆ.[೧]

ಪ್ರಸ್ತುತ ಅಧ್ಯಯನವು 'ಕೂಹೂಂಡಿ ಮೂಸಾಸಿರ' ಎಂಬ ಆಡಳಿತ ವಿಭಾಗದ ಒಂದು ಪ್ರದೇಶಕ್ಕೆ ಸೀಮಿತವಾಗಿದೆ. ಕರ್ನಾಟಕ ಸಂಸ್ಕೃತಿಯ ಹಿರಿಮೆಯನ್ನು ಹೊತ್ತುನಿಂತ ಹಲವು ಪ್ರಮುಖ ರಾಜಕೀಯ ವಿಭಾಗಗಳಲ್ಲಿ 'ಕೂಹೂಂಡಿ ಮೂಸಾಸಿರ' ಒಂದು ಆಡಳಿತ ವಿಭಾಗವಾಗಿತ್ತು. ಅಂದರೆ ದಕ್ಷಿಣಕ್ಕೆ ಘಟಪ್ರಭಾ, ಉತ್ತರಕ್ಕೆ ಕೃಷ್ಣಾ ನದಿಯ ಮಧ್ಯದ ನಿಸರ್ಗರಮಣೀಯ ತಾಣ ಇದಾಗಿದೆ. ಕ್ರಿ.ಶ. ೧೨ನೇ ಶತಮಾನದ ಪ್ರಸಿದ್ಧ ಕವಿ ರಾಜಾದಿತ್ಯನ 'ವ್ಯವಹಾರಗಣಿತ'ದಲ್ಲಿ ವಿವರಣೆ ಈ ರೀತಿಯಾಗಿದೆ.[೨]

> *''ವನಶತಿಯಂ ನದೀನದ ಭೃತ್ಕುಟದಿಂ*
> *ಧನದಾನ್ಯವರ್ಗ ದಿ ।*
> *ಜನಪದ ರಾಜಿಯಂ ಬೆಳವ*
> *ಕೆಯ್ವೊಲದಿಂದೆಸವೊರ್ಗಲಿಂಜಗ ।*
> *ಜನತಮ ಜಿನಧರ್ಮದ ನೆಗಳ್ತೆಯೊಳಿಂದು ಕೂಂಡಿಮಂಡಲ*
> *ಕ್ಕನುಪಮರತ್ನಮಂಡಲಮನಿಪ್ಪುದು*
> *ಪೂವಿನಬಾಗೆ ಸತತಂ''*[೩]

ರಾಯಬಾಗದ ಮೊದಲ ಹೆಸರು 'ಪೂವಿನ ಬಾಗೆ' ಇಲ್ಲವೇ 'ಬಾಗ' ಎಂದು ಶಾಸನಗಳಿಂದ ತಿಳಿದುಬರುತ್ತದೆ. ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಕ್ರಿ.ಶ. ೧೧೮೫ ರ ಹನ್ನಿಕೇರಿ ಶಾಸನದಲ್ಲಿ

---

೧. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧.

೨. ಡಾ. ಶಿ.ಬಾ.ಪಾಟೀಲ : ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, [illegible]೯೭೫, ಪು. ೩೪.

೩. ಎಸ್.ಆಯ್.ಆಯ್. - ೨೦.

'ತೆಂಕಲುಬಾಗಿ' ಎಂದು ಉಲ್ಲೇಖವಾಗಿದೆ. ಇದೊಂದು ಘಟಿಕಾಸ್ಥಾನವೂ ಹೌದು.[೪] ಕ್ರಿ.ಶ. ೧೨ನೆಯ ಶತಮಾನದ ಕವಿ ರಾಜಾದಿತ್ಯನು 'ಕುಂತಣಬಾಗೆ' ಎಂದು ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ಒಟ್ಟಿನಲ್ಲಿ 'ಪೂವಿನಬಾಗೆ', 'ಹೂವಿನಬಾಗೆ', 'ತೆಂಕಲುಬಾಗಿ', 'ರಾಯರ ಬಾಗ', 'ಬಾಗಿ' ಎಂದು ರೂಢಿಯಲ್ಲಿ ಬಂದಿದೆ. ಅಂದಿನ ಕಾಲದಲ್ಲಿ ಈ ಭಾಗದಲ್ಲಿ ವಿವಿಧ ಹೂಗಳು ಇಲ್ಲಿ ಬೆಳೆಯುತ್ತಿದ್ದುದರಿಂದ ರೂಪನಿಷ್ಪತ್ತಿಗೊಂಡು 'ಪೂವಿನಬಾಗೆ' ಎಂದಾಗಿದೆ.

ಪ್ರಸ್ತುತ ರಾಯಬಾಗ (ಕುಂತಣಬಾಗೆ) ಕನ್ನಡ ನಾಡಿನ ಗಂಡುಮೆಟ್ಟಿನ ನೆಲ ಹಾಗೂ ವೀರರ ನಾಡು ಎಂದು ಪ್ರಸಿದ್ಧವಾದ ಬೆಳಗಾವಿ ಜಿಲ್ಲೆಯ ಒಂದು ಪ್ರಸಿದ್ಧ ತಾಲೂಕುಕೇಂದ್ರವಾಗಿದೆ. ಈ ಅಧ್ಯಯನಕ್ಕೆ ಕ್ರಿ.ಶ. ೮ ನೇಯ ಶತಮಾನದಿಂದ ಕ್ರಿ.ಶ. ೧೬ನೇಯ ಶತಮಾನದ ಕಾಲಮಿತಿಯನ್ನು ನಿಗದಿಪಡಿಸಲಾಗಿದೆ. ಈ ಪ್ರದೇಶದ ಚರಿತ್ರೆಗೆ ಸಂಬಂಧಿಸಿದ ದಾಖಲೆಗಳು ಚಾಲುಕ್ಯರ ನಂತರದ ಕಾಲಕ್ಕೆ ಸೇರಿದ್ದರಿಂದ ಈ ನಿರ್ದಿಷ್ಟ ಕಾಲಮಿತಿ ಅವಶ್ಯ. ಬಾದಾಮಿ ಚಾಲುಕ್ಯರಿಂದ ಆರಂಭಗೊಂಡು ವಿಜಯನಗರ ಸಾಮ್ರಾಜ್ಯದವರೆಗೆ ಸೀಮಿತ. ಇಲ್ಲಿ ಕಂಡುಬರುವ ಶಾಸನಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ನಿಷಧಿಕಲ್ಲುಗಳು, ಸ್ಮಾರಕಗಳು, ದೇವಾಲಯಗಳು, ಬಸದಿಗಳು, ಹರಿಯುತ್ತಿರುವ ನದಿಗಳು, ಗುಡ್ಡ ಬೆಟ್ಟಗಳು, ಪ್ರಕೃತಿ, ವನಸಂಪತ್ತು ಇತ್ಯಾದಿ ಅಂಶಗಳನ್ನು ಒಳಗೊಂಡಿದೆ. ಈ ನಿಟ್ಟಿನಲ್ಲಿ ಕೈಗೊಂಡ ಅಧ್ಯಯನವು ಕನ್ನಡ ಭಾಷೆ, ಅವರ ಚರಿತ್ರೆ, ರಾಜಕೀಯ ಚರಿತ್ರೆಗೆ ಸಂಬಂಧಪಟ್ಟಂತೆ ಅರಸು ಮನೆತನಗಳ ಚರಿತ್ರೆ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿ ಮುಂತಾದವುಗಳನ್ನು ಕುರಿತಾದ ಸಂಕ್ಷಿಪ್ತ ಪ್ರಯತ್ನವೆಂದೂ ಇಂತಹ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನವೆಂದು ಕರೆಯಬಹುದಾಗಿದೆ.[೫]

ಒಂದು ನಾಡಿನ ಸಂಸ್ಕೃತಿಯೆಂದರೆ ಆ ನಾಡಿನ ಭಾಷೆ, ಸಾಹಿತ್ಯ, ತತ್ವಜ್ಞಾನ, ಸಂಪ್ರದಾಯ, ಕಲೆ, ವಾಸ್ತುಶಿಲ್ಪ ಮುಂತಾದ ಸೂಕ್ಷ್ಮ ಸಂವೇದನೆಗಳಾಗಿರುತ್ತವೆ. ಅಲ್ಲದೇ ಸಾಮಾಜಿಕ ಶಿಕ್ಷಣ, ಧಾರ್ಮಿಕ ಪದ್ಧತಿ, ಆರ್ಥಿಕ ಸ್ಥಿತಿ ಇವೆಲ್ಲವೂ ಅದರಲ್ಲಿ ಸಮಾವೇಶಗೊಂಡಿರುತ್ತವೆ. ಭಾರತದ ಸಂಸ್ಕೃತಿಯಿಂದ ಕರ್ನಾಟಕದ ಸಂಸ್ಕೃತಿ ಭಿನ್ನವಾಗಿಲ್ಲ. ಇಂತಹ ಸಮಗ್ರ ಚಿತ್ರಣವನ್ನೊಳಗೊಂಡ ಅನೇಕ ಗ್ರಂಥಗಳು ಈಗಾಗಲೇ ಬೆಳಕು ಕಂಡಿವೆ.[೬] ಚರಿತ್ರೆ ರಚನೆಗೆ ಸಾಮಗ್ರಿಗಳಿಗಿಂತ ಅಡೆತಡೆಗಳು ಅಧಿಕವಾಗಿವೆ.

---

೪. ಎಸ್.ಆಯ್.ಆಯ್. - ೨೦, ಪು. ೧೨.

೫. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧., ಡಾ. ಎಸ್.ಕೆ. ಕೊಪ್ಪಾ : ತರ್ದವಾಡಿನಾಡು ಒಂದು ಅಧ್ಯಯನ, ಪು. ೧೧೮.

೬. ಎಸ್.ಕೃಷ್ಣರಾವ್. ಕಪಟರಾಳ್ : ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಪು. ೨೨೧.

ಕರ್ನಾಟಕಕ್ಕೆ ಸುಮಾರು ೨೫೦೦ ವರ್ಷಗಳ ಸುದೀರ್ಘವಾದ ಚರಿತ್ರೆ ಇದೆ. ಗೋದಾವರಿ ನದಿಯಿಂದ ಕಾವೇರಿ ನದಿಯವರೆಗೆ ವಿಸ್ತೃತವಾದ ಭೂಭಾಗವನ್ನು ಆಳಿದ ರಾಜಮನೆತನಗಳು ಹಲವಾರು. ಆಡಳಿತದ ಅನುಕೂಲಕ್ಕಾಗಿ ರಚನೆಗೊಂಡ ಪ್ರಾದೇಶಿಕ ಭಿನ್ನತೆಯಿಂದೊಡಗೂಡಿದ ರಾಜರುಗಳ ಸಣ್ಣ-ದೊಡ್ಡ ಆಡಳಿತ ವಿಭಾಗ. ಅಲ್ಲಿರುವ ಜನಾಂಗ, ಅವರ ಜೀವನವನ್ನು ಒಂದೇ ಹಂತದಲ್ಲಿ ಚಿತ್ರಣ ನೀಡುವುದು ಕಷ್ಟಸಾಧ್ಯ. ಅಂತೆಯೇ ಅವುಗಳನ್ನು ಕಾಲ, ಮನೆತನ, ಸಂಸ್ಕೃತಿ ಮುಂತಾದ ಘಟ್ಟಗಳಲ್ಲಿ ವಿಭಜಿಸಲಾಗಿದೆ. 'ವಿವಿಧತೆಯಲ್ಲಿ ಏಕತೆ' ತತ್ವದ ಮೇಲೆ ನಿಂತ ಇಲ್ಲಿನ ಚರಿತ್ರೆ ಪ್ರಾದೇಶಿಕ ಚರಿತ್ರೆಯ ಬೆಳವಣಿಗೆಗೆ ಹೊಂದಿಕೊಂಡು ಬೆಳೆಯಬೇಕಾಗಿದೆ. ಪ್ರಸ್ತುತ ಅಧ್ಯಯನವು ಅಂತಹವುಗಳಲ್ಲಿ ಒಂದಾಗಿದೆ.[೭] ಆಯಾ ಪ್ರದೇಶದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ನೆಲೆ-ಬೆಲೆಗಳ ಸೆಲೆಯಾಗಿ ಸಂಪೂರ್ಣ ಚಿತ್ರಣವನ್ನೊಳಗೊಂಡ ಅಧ್ಯಯನವಾಗಿದೆ. ಸಮಕಾಲೀನ ಅರಸು ಮನೆತನಗಳ ವಿವರಗಳನ್ನೊಳಗೊಂಡ ಹಲವಾರು ಸಾಹಿತ್ಯ ಕೃತಿಗಳು ರಚನೆಗೊಂಡಿವೆ. ಈ ಎಲ್ಲ ಸಾಹಿತ್ಯಕೃತಿಗಳು ಅಂದಿನ ಕಾಲದ ಸಂಸ್ಕೃತಿ ಮತ್ತು ಸಮಾಜಕ್ಕೆ ಕೆಲವು ಪುಟಗಳನ್ನು ಮೀಸಲಿಟ್ಟಿವೆ. ಜೆ.ಎಮ್. ಮೊರೆಸ್, ಬಿ.ಎ. ಸಾಲೆತ್ತೋರ್, ಎಂ.ವ್ಹಿ.ಕೃಷ್ಣರಾವ್, ವ್ಹಿ.ಎ.ಸ್ಮಿಥ್, ಆರ್.ಎಸ್.ಪಂಚಮುಖಿ ಜೆ.ಎಫ್.ಫ್ಲೀಟ್, ಆರ್.ಎಸ್.ಮುಗಳಿ, ಆಲೂರ ವೆಂಕಟರಾವ್, ಡಾ. ಪಿ.ಬಿ.ದೇಸಾಯಿ, ಕೆ.ಜಿ.ಕುಂದಣಗಾರ, ಬಿ.ಎಲ್.ರೈಸ್, ಬಿ.ಆರ್.ಗೋಪಾಲ, ಅ.ಸುಂದರ, ಕ್ಯಾಂಬೆಲ್ ಮುಂತಾದವರು ಪರಂಪರೆಯನ್ನು ಅಧ್ಯಯನ ಮಾಡಿ ಚರಿತ್ರೆಯ ಗ್ರಂಥಗಳನ್ನು ರಚಿಸಿದ್ದಾರೆ.[೮]

**ಆಕರಗಳು :**

ಒಂದು ನಾಡಿನ ಚರಿತ್ರೆಯನ್ನು ಅರಿಯಬೇಕಾದರೆ ಆಕರ ಸಾಮುಗ್ರಿಗಳ ಅವಶ್ಯಕತೆ ಇದೆ. ಅಂತಹವುಗಳೆಂದರೆ ಶಿಲಾಶಾಸನಗಳು, ಸ್ಮಾರಕಗಳು, ದೇವಾಲಯಗಳು, ತಾಮ್ರಪಟಗಳು, ಮೂರ್ತಿಶಿಲ್ಪಗಳು ಮುಂತಾದವು.[೯] ಆದರೆ ಇವುಗಳ ಸಂಗ್ರಹಣಾಕಾರ್ಯ ಶ್ಲಾಘನೀಯ. ಜನರ ಅಜ್ಞಾನ, ಅವಜ್ಞೆಯಿಂದ ಎಷ್ಟೋ ದಾಖಲೆಗಳು ನಾಶವಾಗಿವೆ ಇಲ್ಲವೇ ಬೆಳಕು ಕಾಣದೇ ಉಳಿದಿವೆ. ಶಾಸನಗಳು ಅರಸರ ವಂಶಾವಳಿ, ರಾಜಮಹಾರಾಜರ ಬಿರುದಾವಳಿಗಳನ್ನು, ಅವರ ಅಧಿಕಾರಿ ಹೆಸರು ಹಾಗೂ ಅವರ

---

೭. ಡಾ. ಎ.ಎಸ್. ಅಲ್ಟೇಕರ್ : ವಿಜಯನಗರ ಸಾಮ್ರಾಜ್ಯ, ಪು. ೨೦.
೮. ಎಸ್.ಕೃಷ್ಣರಾವ್. ಕಪಟರಾಳ್ : ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಪು. ೨೨೧.
೯. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೮.

ಸಾಧನೆಗಳನ್ನು ಕುರಿತಾಗಿ ಕೆಲವೊಂದು ಮಾಹಿತಿಯನ್ನು ಒದಗಿಸುತ್ತವೆ.[೧೦] ಜೊತೆಗೆ ರಾಜಕೀಯ ವಿಷಯ, ಧಾರ್ಮಿಕ ಪರಿಸ್ಥಿತಿ, ಅದರ ವಿಧಿ-ವಿಧಾನಗಳು, ಸಾಮಾಜಿಕ, ಆರ್ಥಿಕ ವ್ಯವಸ್ಥೆ ಮುಂತಾದವುಗಳ ವಿವರಣೆಗಳನ್ನು ಒಳಗೊಂಡಿರುತ್ತವೆ.[೧೧]

**ಶಾಸನಗಳು ಮತ್ತು ಅವುಗಳ ಪ್ರಾಮುಖ್ಯತೆ :**

ಭರತ ಖಂಡದಲ್ಲಿ ಅಸಂಖ್ಯಾತ ಶಾಸನಗಳು ದೊರೆಯುತ್ತವೆ. ನಮ್ಮ ನಾಡಿನ ಜನಜೀವನವು ಶಾಸನಗಳಲ್ಲಿ ಅಭಿವ್ಯಕ್ತಿಗೊಂಡಿರುವಂತೆ ಪ್ರಾಯಶಃ ಇನ್ನೆಲ್ಲೂ ವ್ಯಕ್ತವಾಗಿಲ್ಲ. ಶಾಸನಗಳಿಂದ ಅರಸರ ಚರಿತ್ರೆ ಅವರು ನಡೆಸಿದ ಯುದ್ಧಗಳು, ಪ್ರಶಂಸೆ ಜೊತೆಗೆ ಆಡಳಿತ, ವ್ಯಾಪಾರ, ಸಾಮಾಜಿಕ ಸ್ಥಿತಿಗತಿ, ಧಾರ್ಮಿಕ ಪರಿವರ್ತನೆ ಮೊದಲಾದ ವಿಷಯಗಳನ್ನು ತಿಳಿದುಕೊಳ್ಳಬಹುದು. ನಮ್ಮ ದೇಶದಲ್ಲಿ ಶಾಸನಗಳು ವಿಪುಲ ಪ್ರಮಾಣದಲ್ಲಿವೆ. ಎಫಿಗ್ರಾಫಿಯಾ ಕರ್ನಾಟಿಕಾದ ಸಂಪುಟಗಳು, ಎಫಿಗ್ರಾಫಿಯಾ ಇಂಡಿಕಾ, ದಕ್ಷಿಣ ಭಾರತದ ಸಂಪುಟಗಳು ಹಾಗೂ ಇತರೆ ಪುರಾತತ್ವ ವರದಿಗಳಲ್ಲಿ ಪ್ರಕಟಗೊಂಡಿವೆ. ಪ್ರಕಟಗೊಳ್ಳದೇ ಇರುವ ಇನ್ನೂ ಅನೇಕ ಶಾಸನಗಳಿವೆ.[೧೨] ಈ ನಿಟ್ಟಿನಲ್ಲಿಯೂ ಕೂಡ ಕನ್ನಡ ವಿ.ವಿ. ಹಂಪಿ ಜಿಲ್ಲಾವಾರು ಶಾಸನಗಳನ್ನು ಪ್ರಕಟಪಡಿಸಿದೆ.

ಸಂಸ್ಕೃತಿಯ ಅಭ್ಯಾಸಕ್ಕಾಗಿ ಶಾಸನಗಳು ಇತರ ಸಾಧನಗಳಿಗಿಂತ ಮುಖ್ಯವಾದವುಗಳು. ಏಕೆಂದರೆ ಕನ್ನಡ ನಾಡಿನ ಜನಜೀವನವು ಎಲ್ಲಿಯೂ ಯಾವ ಕೃತಿಗಳಲ್ಲಿಯೂ ಮಡುಗಟ್ಟಿ ನಿಂತಿಲ್ಲ. ಕೆಲವು ಕಾವ್ಯಗಳಲ್ಲಿ ಅಭಿವ್ಯಕ್ತಗೊಂಡಿದ್ದರೂ ಹೆಚ್ಚಿನ ಪ್ರಮಾಣದಲ್ಲಿ ಶುದ್ಧ ರೂಪದಲ್ಲಿ ಕಾಣಿಸಿಕೊಳ್ಳುವುದು ಶಾಸನಗಳಲ್ಲಿ ಮಾತ್ರ. ಶಾಸನಗಳು ಚರಿತ್ರೆ ರಚನೆಯಲ್ಲಿ ವಹಿಸಿದ ಪಾತ್ರ ತುಂಬ ಮಹತ್ವದ್ದು.[೧೩] ಚರಿತ್ರೆ ಸ್ವರೂಪಕ್ಕೆ ಶಾಸನ ಸಾಮಗ್ರಿಗಳೇ ಜೀವನಾಡಿ. ಶಾಸನಗಳ ಕಾಲಾನುಕ್ರಮಣಿಕೆಯಲ್ಲಿ ಚರಿತ್ರೆ ಸ್ವರೂಪಕ್ಕೆ ಶಾಸನ ಸಾಮಗ್ರಿಗಳೇ ಜೀವನಾಡಿ. ಶಾಸನಗಳ ಕಾಲಾನುಕ್ರಮಣಿಕೆಯಲ್ಲಿ ಅಶೋಕನ ಶಾಸನಗಳೇ ಭರತ ಖಂಡದಲ್ಲಿ ದೊರೆತ ಅತೀಪ್ರಾಚೀನ ಶಾಸನಗಳು.[೧೪] ನಂತರ ಕಳಿಂಗ ದೊರೆ 'ಖಾರವೇಲ'ನ ಹಾಥಿಗುಂಪಾ

---

೧೦. ಡಾ. ಎಸ್.ರಾಜಶೇಖರ : ಕರ್ನಾಟಕದ ವಾಸ್ತುಶಿಲ್ಪ ಪರಿಚಯ, ಪು. ೫.

೧೧. Henry Cousens : The Chalukyan Architecture, p. 2.

೧೨. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧.

೧೩. ಡಾ. ಎಚ್.ತಿಪ್ಪೇರುದ್ರಸ್ವಾಮಿ, ಎಚ್ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ೧೯೬೮, ಪು. ೧.

೧೪. ಎಮ್.ಆರ್.ಆನವಟ್ಟಿ : ಪ್ರಾಚೀನ ಭಾರತ, ಪು. ೧೬೪.

ಶಾಸನ,[೧೫] ರುದ್ರದಾನ ಜುನಾಗಡ ಶಾಸನ,[೧೬] ಶಾತವಾಹನ ದೊರೆ ಗೌತಮಿಪುತ್ರ ಶಾತಕರ್ಣಿಯ ನಾಶಿಕ ಶಾಸನ,[೧೭] ಸಮುದ್ರಗುಪ್ತನ ಅಲಹಾಬಾದ ಪ್ರಶಸ್ತಿ ಶಾಸನ,[೧೮] ಕಾಕುಸ್ಥವರ್ಮನ ಕ್ರಿ.ಶ. ೪೫೦ ರ ಹಲ್ಮಿಡಿ ಶಾಸನ, ಮೃಗೇಶವರ್ಮನ ತಾಳಗುಂದದ ಶಾಸನ, ಪಲ್ಲವ ದೊರೆ ಮಹೇಂದ್ರವರ್ಮನ ಮಂಡಗಪಟ್ಟು ಶಾಸನ, ಚಾಲುಕ್ಯ ಚಕ್ರವರ್ತಿ ೨ನೇ ಪುಲಕೇಶಿಯ ಐಹೊಳೆ ಪ್ರಶಸ್ತಿ ಶಾಸನ, ರಾಷ್ಟ್ರಕೂಟರ ಕಾಲದ ಜತ್ವಾಯಿ ಶಾಸನ,[೧೯] ೬ನೇ ವಿಕ್ರಮಾದಿತ್ಯನ ವಡಗೇರಿ ಶಾಸನ, ಚೋಳದೊರೆ ೧ನೇ ಪರಾಂತಕನ ಉತ್ತರಮೇರೂರ ಶಾಸನ ಮುಂತಾದ ಪ್ರಮುಖ ಶಾಸನಗಳನ್ನು ಹಿನ್ನೆಲೆಯಾಗಿ ತಿಳಿಸಬಹುದು.

ಪ್ರಸ್ತುತ ಅಧ್ಯಯನದ ಕ್ಷೇತ್ರವಾದ 'ಕುಂತಣಬಾಗೆ' ಪ್ರದೇಶದಲ್ಲಿಯೂ ಹಲವಾರು ಮಹತ್ವದ ಶಾಸನಗಳು ಲಭ್ಯವಾಗಿವೆ.[೨೦] ಅವುಗಳಲ್ಲಿ ಪ್ರಮುಖವಾದವುಗಳೆಂದರೆ -

೧. ಕ್ರಿ.ಶ. ೧೧೦೦ ರ ಸಂಕೇಶ್ವರ ಶಾಸನದಲ್ಲಿ ಈ ಪ್ರದೇಶ ಪ್ರಯಾಗದಷ್ಟೇ ಪ್ರಸಿದ್ಧವಾಗಿತ್ತೆಂದು ತಿಳಿಸುತ್ತದೆ. 'ಬ್ರಹ್ಮಪುರಿನೂರ ಮನೆ' ಎಂಬ ಉಲ್ಲೇಖವಿದೆ.[೨೧]

೨. ಕ್ರಿ.ಶ. ೧೧೨೭ ರ ಜಗದೇಕಮಲ್ಲನ ಶಾಸನದಲ್ಲಿ 'ಪೂವಿನಬಾಗೆ' ಯು ಪ್ರಮುಖ ಘಟಿಕಾಸ್ಥಾನವಾಗಿ, ಶ್ರೇಷ್ಠ ವಿದ್ವಾಂಸರಿಂದ ಕೂಡಿದ ವಿವರಣೆಯಿದೆ.[೨೨]

೩. ಕ್ರಿ.ಶ. ೧೨ನೇ ಶತಮಾನದ ರಾಜಾದಿತ್ಯನ [illegible] ಪ್ರಾಚೀನತೆಯನ್ನು ತಿಳಿಯುವಲ್ಲಿ ಸಹಾಯಕವಾಗಿವೆ.

೪. ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಕ್ರಿ.ಶ. ೧೧೮೫ ರ ಹನ್ನಿಕೇರಿ ಶಾಸನದಲ್ಲಿ ಕುಂತನಬಾಗೆಯನ್ನು 'ಪೂವಿನಬಾಗೆ' ಯೆಂದು ಕರೆಯಲಾಗಿದೆ.

೫. ಕ್ರಿ.ಶ. ೧೦೭೬-೧೧೨೬ ರವರೆಗೆ ಆಳ್ವಿಕೆ ನಡೆಸಿದ ೬ನೇ ವಿಕ್ರಮಾದಿತ್ಯನ ಕಾಲದ ವೀರಗಲ್ಲು ಶಾಸನವೊಂದು ಅವನ ಸೈನಿಕ ಸಾಧನೆಗಳ ಮೇಲೆ ಬೆಳಕು ಚೆಲ್ಲುತ್ತದೆ.[೨೩]

---

೧೫. ಎಮ್.ಆರ್.ಆನವಟ್ಟಿ : ಪ್ರಾಚೀನ ಭಾರತ, ಪು. ೨೩೧.

೧೬. ಡಾ. ಪಿ.ಬಿ. ದೇಸಾಯಿ, ಬಾ.ರಾ. ಗೋಪಾಲ : ಪ್ರಾಚೀನ ಭಾರತದ ಚರಿತ್ರೆ, ಪು. ೨೬೫.

೧೭. ಎಮ್.ಆರ್.ಆನವಟ್ಟಿ : ಪ್ರಾಚೀನ ಭಾರತ, ಪು. ೩೧೩.

೧೮. ಡಾ. ಪಿ.ಬಿ. ದೇಸಾಯಿ : ಕರ್ನಾಟಕ ಇತಿಹಾಸ, ಪು. ೬೦.

೧೯. ಎ.ಎಮ್.ಅಣ್ಣಿಗೇರಿ : ಸಾಹಿತ್ಯ ಪರಿಚಯ, ಪು. ೧೫.

೨೦. ಡಾ. ಶಿ.ಬಾ.ಪಾಟೀಲ : ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಸಂಕೇಶ್ವರ, ೧೯೯೫, ಪು. ೩೪.

೨೧. ಎಸ್.ಆಯ್.ಆಯ್. - ೨೦.

೨೨. ಎಸ್.ಆಯ್.ಆಯ್. - ೨೦.

೨೩. ಎಸ್.ಆಯ್.ಆಯ್. - ೨೦.

೬. ಕ್ರಿ.ಶ. ೧೦೮೯ ರ ರಾಯಬಾಗ ಶಾಸನ ೬ನೇ ವಿಕ್ರಮಾದಿತ್ಯನ ಮುಂದುವರೆದ ದಿಗ್ವಿಜಯಗಳ ಬಗ್ಗೆ ಮಾಹಿತಿ ನೀಡುತ್ತದೆ.

೭. ಕ್ರಿ.ಶ. ೧೨೦೧ ರ ವೇಣುಗ್ರಾಮದ ಶಾಸನದಲ್ಲಿ ರಟ್ಟ ದೊರೆ ೪ನೇ ಕಾರ್ತವೀರ್ಯನ ಕಾಲದಲ್ಲಿ ನಿರ್ಮಾಣಗೊಂಡ ಜೈನ ಬಸದಿಯ ವಿವರಗಳನ್ನೊಳಗೊಂಡಿದೆ. ಇದೊಂದು ದಾನ ಶಾಸನವಾಗಿದ್ದು ಕೂಹೂಂಡಿ ಮೂಸಾಸಿರದ ಚಿಂಚಲಿ ಗ್ರಾಮವನ್ನು ಜಿನಾಲಯಕ್ಕೆ ದತ್ತಿಯಾಗಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.

೮. ಕ್ರಿ.ಶ. ೧೫೧೯ ರ ಆದಿನಾಥ ಜಿನಾಲಯದ ಸ್ತಂಭದ ಸಂಸ್ಕೃತಶಾಸನ ಹಾಗೂ ೧೫೯೫ ರ ಸ್ತಂಭವೊಂದರ ಮೇಲಿನ ಶಾಸನ ಪಾರ್ಶ್ವನಾಥನ ಮೂರ್ತಿಸ್ಥಾಪನೆಯ ವಿವರಗಳನ್ನೊಳಗೊಂಡಿದೆ.

ಶಾಸನಗಳ ಪರಂಪರೆ ನಡೆದು ಬಂದ ದಾರಿ, ಏರಿಳಿತಗಳು, ಭಾಷೆ ರೀತಿ, ಬರಹ, ಕೆತ್ತನೆ ಮುಂತಾದ ವಿಷಯಗಳಲ್ಲಿಯೂ ಪರಿವರ್ತನೆ ಕಂಡುಬರುತ್ತದೆ. ಶಾಸನಗಳಂತೆ ವೀರಗಲ್ಲುಗಳು, ಮಹಾಸತಿಕಲ್ಲುಗಳು, ನಿಷಧಿಗಲ್ಲುಗಳು ಕೂಡ ಮಹತ್ವದ್ದಾಗಿವೆ. ಅವುಗಳ ಸಂಗ್ರಹಣಾ ವಿಧಾನ ಸಮರ್ಪಕವಾಗಿಲ್ಲದಿದ್ದರೂ ಅವುಗಳಿಂದ ದೊರೆಯುವ ಮಾಹಿತಿಯೇನೂ ನಿರುಪಯುಕ್ತವಲ್ಲ. ಒಂದಿಲ್ಲೊಂದು ವಿಧದಲ್ಲಿ ಈ ವಿಭಾಗದ ಚರಿತ್ರೆ ರಚನೆಗೆ ಅವು ಸಹಾಯಕಾರಿಯಾಗಿವೆ.[೨೪] ಇವು ಯುದ್ಧದಲ್ಲಿ ಮಡಿದ ವೀರರ ಶೌರ್ಯ-ಸಾಹಸಗಳ ಪ್ರತೀಕವಾಗಿದೆ. ಪ್ರಾಚೀನ ಕರ್ಾಟಕದಲ್ಲಿ ಜನಜೀವನದ ಆದರ್ಶಗಳಾಗಿದ್ದು ಅವರ ಬಾಳನ್ನು ಹಿಡಿದು ನಡೆಯಿಸಿದ ಮೌಲ್ಯಗಳೆಂದರೆ - ವೀರ ಮತ್ತು ತ್ಯಾಗ, ತಮ್ಮ ಪೋಷಕರ ಪರವಾಗಿ ಯುದ್ಧದಲ್ಲಿ ಮಡಿದವರ ಅಥವಾ ಗೆದ್ದು ಹಿಂದಕ್ಕೆ ಬಂದವರ ಪ್ರಶಸ್ತಿ ರೂಪವಾದ ಶಾಸನಗಳೇ ವೀರಶಾಸನ ಅಥವಾ ವೀರಗಲ್ಲುಗಳು.[೨೫]

ರಣರಂಗದಲ್ಲಿ ಮಡಿಯುವುದು ಮರಣವಲ್ಲ, ಬದಲಾಗಿ ಸ್ವರ್ಗವನ್ನು ಸೇರುವ ಸಂಧಾನವೆಂದು ಜನರು ದೃಢವಾಗಿ ನಂಬುತ್ತಿದ್ದರು. ಅದರ ಪರಿಣಾಮವಾಗಿ ಹೋರಾಟದ ವಿವರಗಳುಳ್ಳ ವೀರಗಲ್ಲುಗಳನ್ನು ಅವರ ಸ್ಮಾರಕವೆಂದು ನಿಲ್ಲಿಸುತ್ತಿದ್ದರು.[೨೬] ಕವಿಗುಣದವರು ಸ್ಪಷ್ಟವೂ, ಸತ್ವಯುತವೂ ಆದ ಗಂಡುಭಾಷೆಯಲ್ಲಿಯೇ ತಮ್ಮ ಪ್ರಾಮಾಣಿಕವಾದ ಪ್ರಶಂಸೆಗಳನ್ನು ಅಳವಡಿಸಿ ನಾಡಿನ ಜೀವಂತ

---

೨೩. ಎಸ್.ಆಯ್.ಆಯ್. - ೨೦.
೨೪. ಡಾ. ಚೆನ್ನಕ್ಕ ಪಾವಟೆ : ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪು. ೫.
೨೫. ಶೇಷಶಾಸ್ತ್ರಿ ಆರ್. : ಕರ್ನಾಟಕದ ವೀರಗಲ್ಲುಗಳು, ಪು. ೨೭೧.
೨೬. ಡಾ. ಚೆನ್ನಕ್ಕ ಪಾವಟೆ : ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪು. ೫.

ಸಂಸ್ಕೃತಿಯನ್ನು ಹೆಚ್ಚಿಸಿದರು. ಶಿಲ್ಪಗಳು ವೀರರ ನೆನಪು ಸಜೀವವಾಗಿರುವಂತೆ ಅವರ ಆಕೃತಿಗಳನ್ನು ಸಹ ಕೊರೆದಿದ್ದಾರೆ. ವೀರಗಲ್ಲುಗಳಿಗಿಂತ ಭಿನ್ನವಾದ ಮತ್ತೊಂದು ಪ್ರಕಾರದ ದಾಖಲೆಗಳೆಂದರೆ ಸತಿ ಅಥವಾ ಮಹಾಸತಿಗಲ್ಲುಗಳು. ಅಂದರೆ ಮೃತನಾದ ಪತಿಯ ಬಳಿಯಲ್ಲಿ ಸಾವಿನಲ್ಲೂ ಸಂಗಾತಿಯಾಗಿರಬೇಕೆಂದು ತನ್ನ ಜೀವನವನ್ನು ತ್ಯಾಗ ಮಾಡಿದ ಮಹಾಸತಿ ಅಥವಾ ಮಾಸ್ತಿಯ ಸ್ಮಾರಕವಾಗಿ ವಿಶಿಷ್ಟ ರೀತಿಯಲ್ಲಿ ಕೆತ್ತಿ ನಿಲ್ಲಿಸಿದ ಕಲ್ಲುಗಳೇ ಮಹಾಸತಿ ಕಲ್ಲುಗಳು. ಇವು ವೀರ ಮಹಿಳೆಯರ ಮರಣದ ಸಂಕೇತವಾಗಿರುತ್ತವೆ.[೨೭]

ಜೈನಧರ್ಮಕೇಂದ್ರವಾಗಿ ಕಾಣಿಸಿಕೊಂಡಿರುವ ರಾಯಬಾಗದ ಹಿನ್ನೆಲೆಯಾಗಿ ಈ ನಿಷಧಿಕಲ್ಲು ಹಾಗೂ ಇತರೆ ಇತಿಹಾಸವನ್ನು ವಿವರಿಸಲಾಗಿದೆ. ಜೈನಧರ್ಮದಲ್ಲಿ ಸಲ್ಲೇಖನ ವಿಧಿಯಿಂದ ಮಡಿದವರ ಸ್ಮಾರಕವಾಗಿ ಕೆಲವೊಂದು ಕಲ್ಲುಗಳನ್ನು ನೆಡುತ್ತಿದ್ದರು. ಅಂಥವುಗಳನ್ನು ನಿಷಧಿಕಲ್ಲುಗಳೆಂದು ಕರೆಯುತ್ತಾರೆ. ಜೈನಯತಿಯ ಗೃಹಸ್ಥಾನ ಅಥವಾ ಮಹಿಳೆಯ ಪ್ರಾಯೋಪವುನದ ನೆನಪನ್ನು ಮುಂದುವರೆಸುವುದಕ್ಕೆ ನಿಲ್ಲಿಸಿದಂಥ ಕಲ್ಲುಗಳೇ ನಿಷಧಿಕಲ್ಲುಗಳು. ಗುರುವಿನ ಎದುರು ಕುಳಿತುದರ ನೆನಪನ್ನು ಚಿರಗೊಳಿಸುವುದರಿಂದಲೇ ನಿಷಧಿಕಲ್ಲು ಎಂಬುದಾಗಿ ಕರೆಯಲಾಯಿತು. ಇವುಗಳ ಮೇಲೆ ಜಿನಸ್ತೋತ್ರಗಳನ್ನು ಬೋಧಿಸುತ್ತಿರುವ ಗುರು, ಗುರುವಿನ, ಮುಂದೆ ಪುಸ್ತಕವಿರುವ ವ್ಯಾಸಪೀಠ, ಇನ್ನೊಂದು ಕಡೆ ವೃತಧಾರಿಯಾಗಿ ಜಿನಸ್ತೋತ್ರಗಳನ್ನು ಕೇಳುತ್ತಿರುವ ವ್ಯಕ್ತಿ ಮುಂತಾದ ಚಿತ್ರಗಳಿರುತ್ತವೆ.[೨೮] ಹೀಗೆ ಗುರುವಿನ ಹತ್ತಿರ ಕುಳಿತು ಪ್ರಾಣ ತ್ಯಜಿಸಿದ ಸ್ಥಳಕ್ಕೆ ಆ ಸ್ಥಳವನ್ನು ಮುಂದಿನವರ ನೆನಪಿನಲ್ಲಿ ಉಳಿಸುವುದಕ್ಕಾಗಿ ಕೆತ್ತಿದ ಬರಹಕ್ಕೆ 'ನಿಷಿಧಿಕಾ' ಎಂದು ಹೆಸರು. ಇಂಥ ಅನೇಕ ನಿಷಿಧಿಕಲ್ಲುಗಳು ಈ ಭಾಗದಲ್ಲಿ ಕಂಡುಬರುತ್ತೇವೆ. ಏಕೆಂದರೆ ಈ ಪ್ರದೇಶ ಜೈನಧರ್ಮದ ಪ್ರೌಢ ವ್ಯವಸ್ಥೆಯ ತಾಣವಾಗಿ ಕಾಣಿಸಿಕೊಂಡಿದೆ.

**ಸ್ಮಾರಕಗಳು :**

ಒಂದು ನಾಡಿನ ಸಂಸ್ಕೃತಿಯ ಪ್ರತಿಕೃತಿಗಳೆಂದರೆ ಅಲ್ಲಿಯ ಸ್ಮಾರಕಗಳು. ಕೆಲವೊಮ್ಮೆ ಸಾಹಿತ್ಯ ಹಾಗೂ ಶಾಸನಗಳು ತಿಳಿಸಲಾರದೇ ಹೋದ ಅಂಶಗಳನ್ನು ಸ್ಮಾರಕಗಳ ಅಧ್ಯಯನದಿಂದ ತಿಳಿಯಬಹುದಾಗಿದೆ. ಇತಿಹಾಸ ರಚನೆಯಲ್ಲಿ ಇವು ಕೂಡ ಪ್ರಮುಖವಾಗಿದೆ. ಸ್ಮಾರಕಗಳಲ್ಲಿ ದೇವಾಲಯಗಳು ಬಸದಿಗಳು, ಮೂರ್ತಿವಿಗ್ರಹಗಳು, ಕೋಟೆಕೊತ್ತಲಗಳು, ಕೆರೆಕಟ್ಟೆಗಳು, ಮಂದಿರಗಳು ಹಾಗೂ ಸ್ತಂಬಗಳು

---

೨೭. ಡಾ. ಎಸ್.ಕೆ. ರಾಮಚಂದ್ರರಾವ್ : ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಪು.

೨೮. ಡಾ. ಎಸ್.ರಾಜಶೇಖರ: ಕರ್ನಾಟಕದ ವಾಸ್ತುಶಿಲ್ಪ ಪರಿಚಯ, ಪು. ೫.

ಸೇರ್ಪಡೆಯಾಗುತ್ತವೆ.[೯] ಇವುಗಳಲ್ಲಿ ಹೆಚ್ಚಿನವು ನಾಶವಾಗಿದ್ದರೂ ಕೆಲವೊಂದು ಸುಸ್ಥಿತಿಯಲ್ಲಿ ಉಳಿದು ಬಂದಿವೆ. ಪ್ರಾಚೀನ ದೇವಾಲಯ, ಕೋಟೆ, ಅವಶೇಷಗಳುಳ್ಳ ನೆಲೆ, ಅರಮನೆ ಹಾಗೂ ಸ್ಮಾರಕಗಳ ಅಧ್ಯಯನವು ಬೇರೆ ಬೇರೆ ಧರ್ಮಗಳ ಪ್ರಭಾವ, ಅಂದಿನ ಜನಜೀವನ ಅವರ ಕಲಾಭಿರುಚಿ, ಕಲಾಕುಶಲತೆ, ಮೊದಲಾದ ವಿವರಗಳನ್ನೊದಗಿಸುತ್ತವೆ. ಸಿದ್ದೇಶ್ವರ, ಸೋಮನಾಥ, ಲಗಮವ್ವ, ಯಲ್ಲಮ್ಮ, ಹಣಮಂತ, ಸಂತೂಬಾಯಿ, ಗಣಪತಿ, ನರಸಿಂಹ, ಬಂಕನಾಥ, ವಿಠ್ಠಲಮಂದಿರ, ಆದಿನಾಥ, ಮಾರಸಿಂಗಯ್ಯ ಬಸದಿಗಳು, ಜಾಮಿಯಾ ಮಸಿದಿಗಳು ಮುಂತಾದವು ಇಲ್ಲಿನ ದೇವಾಲಯಗಳ ಪಟ್ಟಿಯಲ್ಲಿ ಸೇರ್ಪಡೆಗೊಳ್ಳುತ್ತವೆ.[೩೦]

ಇವುಗಳೊಂದಿಗೆ ಸಾರ್ವಜನಿಕ ಕೆರೆ, ಕಟ್ಟೆ, ಬಾವಿಗಳ ನಿರ್ಮಾಣದ ಉಲ್ಲೇಖಗಳಿಗೂ ಕೊರತೆಯಿಲ್ಲ. ಸ್ಮಾರಕ ಶಿಲೆಗಳಿಗೆ ಸಂಬಂಧಿಸಿದಂತೆ ವೀರಗಲ್ಲುಗಳ ಸ್ಥಾನ ಪ್ರಮುಖವಾಗಿದ್ದು ರಣರಂಗದ ಚಿತ್ರಣವನ್ನು ಅದಕ್ಕೆ ಪೂರಕವಾದ ಸಾಧನ ಸಾಮಗ್ರಿಗಳ ವಿವರಣೆಯನ್ನು ಅವು ಒದಗಿಸುತ್ತವೆ. ಮಾಸ್ತಿಕಲ್ಲುಗಳು ಗಂಡನೊಂದಿಗೆ ಸಹಗಮನ ಮಾಡಿ ಮಹಾಸತಿಯರೆನಿಸಿಕೊಂಡವರ ಸ್ಮಾರಕಗಳಾಗಿದ್ದು ಈ ಪದ್ಧತಿಗೆ ಪೋಷಕವಾದ ನಮ್ಮ ಸಮಾಜದ ಮಾನಸಿಕ ಹಿನ್ನೆಲೆಯಲ್ಲಿ ಸತಿಹೋದವಳ ತ್ಯಾಗದ ಬಗ್ಗೆ ಜನತೆ ತೋರುತ್ತಿದ್ದ ಗೌರವದ ಪ್ರತೀಕವಾಗಿ ಅವು ನಿಂತಿವೆ. ಇನ್ನು ನಿಷಧಿಕಲ್ಲುಗಳು ಪ್ರಾಣೋತ್ಕ್ರಮಣ ಪರ್ಯಂತ ಉಪವಾಸವ್ರತ ಹಿಡಿದು ಸಾವನ್ನಪ್ಪಿದ ಜೈನ ಶ್ರಾವಕ-ಶ್ರಾವಕಿಯರ ಸ್ಮಾರಕಗಳಾಗಿವೆ.

**ಸಾಹಿತ್ಯ :**

'ಸಾಹಿತ್ಯವು ಜನಜೀವನದ ಪ್ರತಿಬಿಂಬ'ವಾಗಿರುವುದರಿಂದ ಆಯಾಕಾಲದ ಜನಜೀವನವನ್ನು ಪಡಿಮೂಡಿಸುತ್ತಿರುವ ಕಾವ್ಯ-ಪುರಾಣಗಳ ಮಹತ್ವ ಇತಿಹಾಸ ರಚನೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ.[೩೧] ಕುಂತನಬಾಗಿ ಒದು ಪ್ರಸಿದ್ಧ ವಿದ್ಯಾಕೇಂದ್ರವಾಗಿ ಮಹಾಘಟಿಕಾಸ್ಥಾನವಾಗಿ, ಅಗ್ರಹಾರವಾಗಿ ಮೆರೆದ ಸ್ಥಳವಾಗಿದೆ. ಇಲ್ಲಿನ ಪಂಡಿತರು ಮಹಾವಿದ್ಯಾ ಪಾರಂಗತರಾಗಿದ್ದರು. ಅವರಲ್ಲಿ ಕುಮಾರಕೀರ್ತಿ ಅಗ್ರಗಣ್ಯರು. ಇವರಿಂದ ರಚಿತವಾದ ಯಾವುದೇ ಕೃತಿಗಳು ಲಭ್ಯವಿಲ್ಲ. ರಟ್ಟರ-೩೦೦ ವರ್ಷಗಳ ಅವಧಿಯು ಸುವರ್ಣಯುಗವೆಂದು ಪ್ರಸಿದ್ಧವಾಗಿವೆ. ಅನೇಕ ಕವಿಗಳು ಇವರ ಆಶ್ರಯದಾತರಾಗಿ ಕನ್ನಡ ಸಾಹಿತ್ಯವನ್ನು

---

೨೯. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧.

೩೦. ಹೊಂಬೆಳಕು, ವಾರ್ಷಿಕ ಸಂಚಿಕೆ, ಪು. ೧೮.

೩೧. ಡಾ. ಎಚ್.ತಿಪ್ಪೇರುದ್ರಸ್ವಾಮಿ, ಎಚ್ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ೧೯೬೮, ಪು. ೧.

ಶ್ರೀಮಂತಗೊಳಿಸಿದ್ದಾರೆ. ಇಂತಹ ಅಗ್ರಹಾರದಲ್ಲಿದ್ದು ಕನ್ನಡದಲ್ಲಿ ಗಣಿತಶಾಸ್ತ್ರ ಗ್ರಂಥಗಳನ್ನು ಬರೆದ ಮೊದಲಿಗನೆಂಬ ಖ್ಯಾತಿ ರಾಜಾದಿತ್ಯನದು. ವ್ಯವಹಾರಗಣಿತ, ಕ್ಷೇತ್ರಗಣಿತ, ವ್ಯವಹಾರರತ್ನ, ಲೀಲಾವತಿ ಚರಿತೆ, ಚಿತ್ರಹಸುಗೆ, ಜೈನ ಗಣಿತಸೂತ್ರ, ಚಿಕೋದಾರಣಂ ಮುಂತಾದ ಗ್ರಂಥಗಳನ್ನು ಕಾವ್ಯರೂಪದಲ್ಲಿ ರಚಿಸಿದ್ದು ಈತನ ವೈಶಿಷ್ಟ್ಯ.[೩೨] ಗಣಿತ ವಿಲಾಸ, ಪದ್ಯ ವಿದ್ಯಾಧರ ಮುಂತಾದ ಬಿರುದುಗಳು ಈತನ ಪಾಂಡಿತ್ಯ ಹಾಗೂ ಸಮಾಜದಲ್ಲಿ ಆತನು ಹೊಂದಿದ್ದ ಪ್ರತೀಕ್ಷೆಯ ಅರಿವಾಗುತ್ತದೆ. ಇವನಿಂದಲೇ ಈ ವಿಭಾಗದಲ್ಲಿ ಸಾಹಿತ್ಯಝರಿ ಉಗಮಿಸಿ ಇಂದು ಬೃಹತ್ ತೊರೆಯಾಗಿ ಬೆಳೆದು ನಿಂತದ್ದನ್ನು ಕಂಡಾಗ ಮೈ ಪುಳಕಿತವಾಗುತ್ತದೆ.

ಈ ರೀತಿಯಾಗಿ ಕುಂತನಬಾಗಿ ಪ್ರದೇಶದಲ್ಲಿ ದೊರೆತ ಶಾಸನಗಳು, ವೀರಗಲ್ಲುಗಳು, ಮಾಸ್ತಿಕಲ್ಲು ಹಾಗೂ ಸ್ಮಾರಕಗಳು ಒದಗಿಸುವ ಮಾಹಿತಿಯನ್ನು ಸಂಗ್ರಹಿಸಿ ಅಲ್ಲಿನ ವಿಷಯಕ್ಕನುಗುಣವಾಗಿ ವಿವಿಧ ಅಧ್ಯಾಯಗಳ ಮೂಲಕ ಚಿತ್ರಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನದ ಉದ್ದೇಶ :**

ಒಂದು ಪ್ರದೇಶದ ಅಥವಾ ನಾಡಿನ ಇತಿಹಾಸ ರಚನೆಯು ಅಲ್ಲಿ ದೊರೆಯುವ ಪ್ರಾಚೀನ ಆಧಾರಗಳನ್ನು ಹಾಗೂ ಇತರೆ ಮಹತ್ವದ ದಾಖಲೆಗಳನ್ನು ಒಳಗೊಂಡಿರುತ್ತವೆ.[೩೩] ಅದೇ ರೀತಿ 'ಕುಂತನಬಾಗೆ' ಅಧ್ಯಯನದ ರಚನೆಯು ಸಹ ಅನೇಕ ಉದ್ದೇಶಗಳನ್ನು ಒಳಗೊಂಡಿದೆ. ಒಂದು ಅಧ್ಯಯನ ಅಥವಾ ವಿಷಯ ನಿರೂಪಣೆ ಪರಿಪೂರ್ಣಗೊಳ್ಳಬೇಕಾದರೆ ಅಗತ್ಯ ಕಾಲಾವಕಾಶ ಬೇಕು. ಈ ಪ್ರದೇಶದಲ್ಲಿ ಜನಿಸಿ ಬೆಳೆದ ನಂತರ ಇಲ್ಲಿನ ನಿಸರ್ಗಸೌಂದರ್ಯ, ಪ್ರಾಚೀನ ದಾಖಲೆಗಳು ನನ್ನಲ್ಲಿ ಏನೋ ಒಂದು ರೀತಿಯ ಕುತೂಹಲ ಮೂಡಿಸಿತು. ಅಂತೆಯೇ ಎಂ.ಫಿಲ್. ಪದವಿಗೆ ಈ ಪ್ರಬಂಧಕ್ಕೆ ಆಯ್ಕೆ ಮಾಡಿಕೊಳ್ಳಲಾಯಿತು.

ಕೇವಲ ವಿಷಯದ ಆಯ್ಕೆಯಿಂದ ಅಧ್ಯಯನ ಪೂರ್ಣಗೊಂಡತಲ್ಲ. ಇಲ್ಲಿ ಸಂಶೋಧನೆ ಮಾಡುವವನ ತಾಳ್ಮೆ, ಕಾರ್ಯವೈಖರಿ, ವಿಷಯ ಸಂಗ್ರಹಣೆಯಲ್ಲಿ ತೋರಬೇಕಾದ ಆಸಕ್ತಿ ಹಾಗೂ ಮಾರ್ಗದರ್ಶಕರ ಸಮಂಜಸ ಹಾಗೂ ಅಷ್ಟೇ ಪರಿಪೂರ್ಣವಾದ ಸಲಹೆ-ಸೂಚನೆಗಳು ಅವಶ್ಯಕ. ವಿಷಯವನ್ನು ಅಧ್ಯಯನಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವ ಕಲೆ ಅಥವಾ ಬರವಣಿಗೆ ಒಂದು ಸಮಗ್ರ ಅಧ್ಯಯನದ ಪರಿಪೂರ್ಣತೆಗೆ ಉತ್ತಮ ಅಂಶಗಳು.

---

೩೨. ಡಾ. ಶಿ.ಬಾ.ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, [illegible]೯೫, ಪು. ೩೪.
೩೩. ಡಾ. ಎಸ್.ವ್ಹಿ.ಪಾಡಿಗಾರ: ಪುರಾತತ್ವಶಾಸ್ತ್ರ, ಪು. ೮.

ಒಂದು ಸುಸಂಬದ್ಧ ಆಡಳಿತ ವಿಭಾಗದಲ್ಲಿ ಮಹತ್ವದ ಭಾಗವಾಗಿರುವ ಅಧ್ಯಯನದ ವಿಷಯವು ಶಾಸನ, ಕಾವ್ಯ ಹಾಗೂ ಇತರೆ ಆಕರ ಗ್ರಂಥಗಳನ್ನು ಒಳಗೊಂಡಿದೆ. ಶಾಸನಗಳನ್ನು ಪ್ರಮುಖ ಆಕರಗಳನ್ನಾಗಿ ಬಳಸಲಾಗಿದ್ದರೂ ಇತರೇ ಆಧಾರ ಗ್ರಂಥಗಳ ವಿಷಯವು ಅಗತ್ಯವಾಗಿದೆ. ಒಟ್ಟಿನಲ್ಲಿ ಒಂದು ಸ್ಥಳದ ಸಮಗ್ರ ಅಧ್ಯಯನಕ್ಕೆ ಹತ್ತು ಹಲವಾರು ದಿಕ್ಕುಗಳಿಂದ ಸಾಧನ ಸಾಮಗ್ರಿಗಳನ್ನು ಸಹಾಯಕವಾಗಿ ಪಡೆದಾಗ ಮಾತ್ರ ಒಂದು ಅಧ್ಯಯನ ಪರಿಪೂರ್ಣವಾಗಬಲ್ಲದು.

**ವಿಷಯ ವ್ಯಾಪ್ತಿ :**

ಒಂದು ವಿಷಯದ ವ್ಯಾಪ್ತಿ ಎಂದರೆ ಆ ಕ್ಷೇತ್ರದ 'ಹರವು' ಅಥವಾ 'ಸೀಮಾರೇಖೆ' ಎಂದರ್ಥ. ಅದೇ ರೀತಿಯಾಗಿ ಕುಂತಣಬಾಗೆ ಎಂಬುದು 'ಕೂಹುಂಡಿ ಮೂಸಾಸಿರ' ಎಂಬ ಪ್ರಮುಖ ರಾಜಕೀಯ ವಿಭಾಗಕ್ಕೆ ಸೇರಿದ್ದು ಈ ಪ್ರದೇಶವನ್ನು ಕ್ರಿ.ಶ. ೯೨೦ ರಿಂದ ೧೨೩೦ ರವರೆಗೆ ಸೌಂದತ್ತಿಯ ರಟ್ಟರು ಆಳ್ವಿಕೆ ನಡೆಸಿದರು. ಈ ಮೊದಲು ಇವರು ಮಳಖೇಡದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು ಹಾಗೂ ಕಲಚೂರಿಯರಿಗೆ ಮಾಂಡಲಿಕರಾಗಿದ್ದರು.[೩೪] ಈಗಿನ ಬೆಳಗಾವಿ ಜಿಲ್ಲೆಯ ದಕ್ಷಿಣದ ಮಲಪ್ರಭಾ ನದಿ, ಉತ್ತರದ ಕೃಷ್ಣಾ ನದಿ, ಬೆಳಗಾವಿಯ ಪೂರ್ವ ಮತ್ತು ಪಶ್ಚಿನ ಭಾಗ ಅಲ್ಲದೆ ಮಹಾರಾಷ್ಟ್ರದ ಚಂದಗಡ, ಗಡಹಿಂಗ್ಲಜ ತಾಲೂಕ ಮತ್ತು ಬಾಗಲಕೋಟ ಜಿಲ್ಲೆಯ ಮುಧೋಳ ಮತ್ತು ಜಮಖಂಡಿ ತಾಲೂಕುಗಳು ಸೇರಿ ಕೂಹುಂಡಿ ಮೂಸಾಸಿರ ಪ್ರದೇಶ ರೂಪುಗೊಂಡಿತು.[೩೫]

*''ವನಶತಿಯಿಂ ನದೀನದ ಭೃತ್ಕುಟದಿಂ*
*ಜನಪದರಾಜಿಯಂ ಬೆಳೆವ*
*ಕೆಯ್ವೊಲದಿಂದೆಸಮಾರ್ಗಲಿಂಜಗ ।*
*ಜನಮತಜಿನಧರ್ಮದ ನೆಗಳ್ತೆಯೊಳಿಂದುಕೊಂಡಿಮಂಡಲ*
*ಕ್ಕನುಪಮ ರತ್ನಮಂಡಲಮೆನಿಪ್ಪುದು*
*ಪೂವಿನಬಾಗೆ ಸತತಂ''*[೩೬]

ಹೀಗೆ ನಿಸರ್ಗಸೌಂದರ್ಯದಿಂದ ಕೂಡಿ ಜೈನಧರ್ಮದ ಅವಾಸಸ್ಥಾನವಾಗಿ ಮೆರೆದ ಕೂಹುಂಡಿ ನಾಡಿಗೆ ರತ್ನಸಮಾನವಾಗಿ ಪೂವಿನಬಾಗೆ ಇದ್ದದು ತಿಳಿದುಬರುತ್ತದೆ. ಪೂವಿನಬಾಗೆ ರಾಯಬಾಗವಾಗಿ

---

೩೪. ಡಾ. ಶಿ.ಬಾ.ಪಾಟೀಲ : ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, [illegible]೯೫, ಪು. ೩೫.
೩೫. ಸೂರ್ಯನಾಥ ಕಾಮತ : ಬೆಳಗಾವಿ ಜಿಲ್ಲಾ ಗೆಜೆಟಿಯರ್.
೩೬. ಎಸ್.ಐ.ಐ. - ೨೦, ಕ್ರಿ.ಶ. ೧೧೪೦-೧೧೪೧ ರ ರಾಯಬಾಗ ಶಾಸನ.

ರೂಪುಗೊಂಡದ್ದು ಕೂಡ ಅಷ್ಟೇ ರಸವತ್ತಾಗಿದೆ. ಮೂಲದಲ್ಲಿ ನಿಸರ್ಗ ಸೌಂದರ್ಯದ ಧಾಮವಾಗಿ ವಿವಿಧ ಹೂವಿನ ಅಂದರೆ ಸಂಪಿಗೆ, ಮಲ್ಲಿಗೆ, ಸೇವಂತಿಗೆ, ನಿರಿಕ್ಷ ಹೂಗಳ ತೋಟವೆನಿಸಿಕೊಂಡ ಇಂದಿನ ರಾಯಬಾಗವನ್ನು ಈ ಪಟ್ಟಣದ ನಿವಾಸಿಯಾದ 'ರಾಜಾದಿತ್ಯ' ತನ್ನ ಕಾವ್ಯದಲ್ಲಿ ''ಕೊಂಡಿಮಂಡಲಕ್ಕನುಪಮಂ ಪೂವಿನಬಾಗೆ'' ಎಂದು ವರ್ಣಿಸುತ್ತಾ ಅಷ್ಟದಿಕ್ಕುಗಳಲ್ಲಿಯೂ ಕಣ್ಣಿಗೆ ತಂಪನ್ನೀಡುವ ವೃಕ್ಷಗಳ ರಾಶಿಯೇ ರಾಶಿಬಾಗಿಯು ಪೂವಿನಬಾಗಿಯೆಂಬ ಹೆಸರಿನಿಂದ ಚೆಲ್ಲಾಗಿತ್ತೆಂದು ಹೇಳಿದ್ದಾನೆ. ಇಂದಿನ ಬೆಳಗಾವಿ ಜಿಲ್ಲೆ, ಬಾಗಲಕೋಟ ಹಾಗೂ ಮಹಾರಾಷ್ಟ್ರದ ಚೆಂದಗಡ ಗಡಹಿಂಗ್ಲಜ ತಾಲೂಕುಗಳನ್ನೊಳಗೊಂಡ ಕೂಹುಂಡಿ ರಾಜಕೀಯ ವಿಭಾಗದಲ್ಲಿ ಕುಂತನಬಾಗೆ ನೆಲೆಗೊಂಡಿದ್ದು ವಿಶಾಲವ್ಯಾಪ್ತಿಯಿಂದ ಕೂಡಿತ್ತು ಎಂಬ ಅಂಶ ತಿಳಿದುಬರುತ್ತದೆ.

ರಾಯಬಾಗ ವಸ್ತುನಿಷ್ಠತೆಯನ್ನು ಮಾತ್ರ ಪರಿಗಣಿಸುತ್ತಿದ್ದ ಇತಿಹಾಸ ಇಂದು ಸಮಾಜವಿಜ್ಞಾನ ಹಾಗೂ ವಿವಿಧ ವಿಷಯಗಳ ಜೊತೆಗೆ ವೈಜ್ಞಾನಿಕವಾಗಿ ಉತ್ಖನನ, ಅನ್ವೇಷಣೆ ಇವೆಲ್ಲ ಪ್ರಯೋಗಗಳಿಂದ ತನ್ನ ಬಾಹುಳ್ಯವನ್ನು ಹೆಚ್ಚಿಸಿಕೊಂಡಿದ್ದನ್ನು ನೋಡುತ್ತೇವೆ. ಮಾನವ ಜನಾಂಗದ ಸಾವಿರಾರು ವರ್ಷಗಳ ಅನುಭವ, ಆಚಾರ-ವಿಚಾರ, ಅನಿಸಿಕೆ ಮುಂತಾದವುಗಳನ್ನು ಸದಾ ನೆನಪಿನಲ್ಲಿಟ್ಟುಕೊಂಡು ಹೋಗುವುದು ಅಸಾಧ್ಯವಾದದ್ದು. ಅವುಗಳು ನಾಶವಾಗದಂತೆ ಬರೆದಿಡುವಂತಹ ರೂಢಿ ಬೇಕು. ಮುಂದಿನ ಇತಿಹಾಸಕ್ಕೆ ಇವೇ ಮೂಲಾಧಾರವಾಗುತ್ತವೆ. ಇಷ್ಟು ವಿಶಾಲ ವ್ಯಾಪ್ತಿಯಲ್ಲಿ ಪ್ರಮುಖ ರಾಜಮನೆತನಗಳಾದ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲಚೂರಿಯರು, ಸೇವುಣರು, ಹೊಯ್ಸಳರು ಹಾಗೂ ವಿಜಯನಗರದ ಅರಸರ ಆಳ್ವಿಕೆಗೊಳಪಟ್ಟು ಸಾವಿರಾರು ವರ್ಷಗಳ ಸುದೀರ್ಘ ಇತಿಹಾಸವನ್ನು ಹೊಂದಿದೆ. ತನ್ನ ಮೇಲೆ ಅಧಿಪತ್ಯ ಸ್ಥಾಪಿಸಿದ ರಾಜಮನೆತನಗಳ ಏಳುಬೀಳುಗಳನ್ನು ಕಂಡು ಈ ಭಾಗದ ಸಂಕ್ಷಿಪ್ತ ರಾಜಕೀಯ ಹೋರಾಟ ಕೊನೆಯವರೆಗೂ ಜೀವಂತವಾಗಿ ಉಳಿದು ಬಂದುದಕ್ಕೆ ಸಾಕ್ಷಿಯಾಗಿವೆ.

ಪ್ರಸ್ತುತ ಅಧ್ಯಯನದ ಸ್ವರೂಪವು ಒಂದು ಕುರುಹುವಿನ ಅಥವಾ ಮಂಡಲದ ಒಂದು ಭಾಗಕ್ಕೆ ಮಾತ್ರ ಸೀಮಿತವಾಗಿದೆ. ಇಲ್ಲಿ ಕಂಡುಬರುವ ಅರಸುಮನೆತನ ಕುರುಹುಗಳನ್ನಾಧರಿಸಿ ವಿಷಯಕ್ಕೆ ತಕ್ಕಂತೆ ಸಂಕ್ಷಿಪ್ತವಾಗಿ ಪ್ರತಿಬಿಂಬಿಸಲಾಗಿದೆ.



## ಅಧ್ಯಾಯ : ಎರಡು

# ಕುಂತಣಬಾಗೆ ಪ್ರಾಚೀನತೆ

'ಕುಂತಣ' ಹೆಸರೇ ಸೂಚಿಸುವಂತೆ 'ಕುಂದಣ', 'ತಿಲಕ', 'ಭೂಷಣ' ಮೊದಲಾದ ಅರ್ಥಗಳು ಗೋಚರಿಸುತ್ತವೆ. ಅಂದರೆ ಕನ್ನಡ ನಾಡಿನ ಗಂಡುಮೆಟ್ಟಿನ ನೆಲ ಹಾಗೂ ವೀರರ ನಾಡು ಎಂದು ಪ್ರಸಿದ್ಧವಾದ ಬೆಳಗಾವಿ ಜಿಲ್ಲೆಯ ಒಂದು ಪ್ರಮುಖ ಸ್ಥಳವೆಂದರೆ 'ಕುಂತಣಬಾಗೆ'. ಕಂಕಣೂರ ಕೇಂದ್ರವಾಗಿಯೂ ರಟ್ಟರ ಉಪರಾಜಧಾನಿಯಾಗಿಯೂ ಸರ್ವಧರ್ಮ ಸಮನ್ವಯದ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ವ್ಯಾಪಾರಿ ಕೇಂದ್ರವಾಗಿ 'ಕುಂತನಬಾಗೆ' ಮೆರೆದಿದೆ.[೧] ಸಹಜವಾದ ನಿಸರ್ಗ ಸೌಂದರ್ಯದಿಂದ ಕೂಡಿರುವ 'ಕುಂತಣಬಾಗೆ' ನಿಸರ್ಗದ ಮಡಿಲಲ್ಲಿ ರಮ್ಯ ತಾಣದಲ್ಲಿ ನೆಲೆನಿಂತಿದೆ. ಬೆಳಗಾವಿ ಜಿಲ್ಲೆಯ ಉತ್ತರ ಭಾಗದಲ್ಲಿ ಸ್ಥಾನೀಕರಣ ಹೊಂದಿದ್ದು, ೧೬° ೨೧' ಉತ್ತರ ಅಕ್ಷಾಂಶದಿಂದ ೧೬° ೪೨' ಉತ್ತರ ಅಕ್ಷಾಂಶ ಹಾಗೂ ೭೪° ೪೨' ಪೂರ್ವ ರೇಖಾಂಶದಿಂದ ೭೫° ೦೫' ಪೂರ್ವರೇಖಾಂಶಗಳ ಮಧ್ಯದಲ್ಲಿ ಹರಡಿದೆ. ಸಮುದ್ರಮಟ್ಟದಿಂದ ಸರಾಸರಿ ೪೫೦ ರಿಂದ ೬೦೦ ಮೀಟರ ಎತ್ತರವಿದೆ. ವಾರ್ಷಿಕ ಮಳೆಯ ಪ್ರಮಾಣ ೫೦೯.೫ ಮಿ.ಮೀ. ಉತ್ತರ ಮತ್ತು ವಾಯುವ್ಯದಲ್ಲಿ ಕೃಷ್ಣಾನದಿ ಪ್ರವಹಿಸಿದೆ. ಕೃಷ್ಣಾ ಕಣಿವೆ ಪ್ರದೇಶ ಬಿಟ್ಟರೆ ಉಳಿದೆಡೆ ಫಲವತ್ತಾದ ಮಣ್ಣು ಕಂಡುಬರುವುದಿಲ್ಲ. ಅನತಿ ದೂರದಲ್ಲಿ ಕೃಷ್ಣಾ ಹಾಗೂ ಘಟಪ್ರಭಾ ನದಿಗಳು ಹರಿಯುತ್ತಿರುವುದರಿಂದ ಈ ಭೂಪ್ರದೇಶ ನಂದನವನವಾಗಿ ರೂಪುಗೊಂಡಿದೆ. ಕುಂತಣಬಾಗೆ ದಕ್ಷಿಣೋತ್ತರವಾಗಿ, ಪೂರ್ವಪಶ್ಚಿಮವಾಗಿ ಅಕ್ಷಾಂಶ-ರೇಖಾಂಶಗಳ ಮಧ್ಯ ೧೭,೮೧೭ ಹೆಕ್ಟೇರುಗಳಷ್ಟು ವಿಸ್ತೀರ್ಣವನ್ನು ೨೦೦೧ ರ ಜನಗಣತಿಯ ಪ್ರಕಾರ ೩,೮೫,೦೦೦ ರಷ್ಟು ಜನಸಂಖ್ಯೆಯನ್ನೊಳಗೊಂಡಿದೆ. ಸಮಶೀತೋಷ್ಣ ವಾತಾವರಣದಿಂದ ಕೂಡಿದ ಪ್ರದೇಶವಾಗಿದೆ.[೨]

ರಾಯಬಾಗದ ಪ್ರಾಚೀನತೆಯನ್ನು ತಿಳಿದುಕೊಳ್ಳುವುದಾದರೆ ಕ್ರಿ.ಶ. ೧೧೮೫ ರ ಹನ್ನಿಕೇರಿ ಶಾಸನದಲ್ಲಿ[೩] 'ತೆಂಕಲುಬಾಗಿ' ಎಂದು ಕರೆಯಲಾಗಿದೆ. ಅದೇ ಶಾಸನದ ಮತ್ತೊಂದು ಕಡೆ 'ಪೂವಿನಬಾಗ'ವೆಂದು ಉಲ್ಲೇಖಿಸಲಾಗಿದೆ. ಒಟ್ಟಿನಲ್ಲಿ ರಾಯಬಾಗದ ಮೊದಲ ಹೆಸರು 'ಪೂವಿನಬಾಗ' ಇಲ್ಲವೆ 'ಬಾಗ' ಎಂಬುದಾಗಿ ತಿಳಿದುಬರುತ್ತದೆ. ಇದೊಂದು ಘಟಿಕಾಸ್ಥಾನವಾಗಿತ್ತೆಂಬುದು ಕೂಡ

---

೧. ಹೊಂಬೆಳಕು, ವಾರ್ಷಿಕ ಸಂಚಿಕೆ, ಪು. ೧೦.

೨. ಅದೇ, ಪು. ೧೦.

೩. ಎಸ್.ಆಯ್.ಆಯ್. - ೨೦.

ಶಾಸನದಿಂದ ತಿಳಿಯುತ್ತದೆ. ೧೨ನೇ ಶತಮಾನದ ಕವಿ ರಾಜಾದಿತ್ಯನಿಂದ ರಚಿತಗೊಂಡ 'ವ್ಯವಹಾರ ಗಣಿತ' ಗ್ರಂಥದಲ್ಲಿ ಇಲ್ಲಿನ ಪ್ರಾಚೀನ ನಿಸರ್ಗ ಸಿರಿಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

*''ವನಶತಿಯಂ ನದೀನದ ಭೃತ್ಕುಟದಿಂ*
*ಧನದಾನ್ಯವರ್ಗ ದಿ ।*
*ಜನಪದ ರಾಜಿಯಂ ಬೆಳವ*
*ಕೆಯ್ವೊಲದಿಂದೆಸವೊರ್ಗಲಿಂಜಗ ।*
*ಜನತಮ ಜಿನಧರ್ಮದ ನೆಗಳ್ತೆಯೊಳಿಂದು ಕೂಂಡಿಮಂಡಲ*
*ಕ್ಕನುಪಮರತ್ನ ಮಂಡಲಮನಿಪ್ಪುದು*
*ಪೂವಿನಬಾಗೆ ಸತತಂ''*[೪]

ಹೀಗೆ ನಿಸರ್ಗ ಸೌಂದರ್ಯವನ್ನು ಪಡೆದ ಈ ಪಟ್ಟಣವು ಕನ್ನಡ ಸಾರಸ್ವತ ಲೋಕಕ್ಕೆ ರಾಜಾದಿತ್ಯನಂತಹ ಶ್ರೇಷ್ಠ ಕವಿ ಹಾಗೂ ಗಣಿತತಜ್ಞನನ್ನು ಕಾಣಿಕೆಯಾಗಿ ನೀಡಿದೆ. ಈ ಪಟ್ಟಣವು ಕುಮಾರ ಕೀರ್ತಿಪಂಡಿತ ದೇವರಂತಹ ಶ್ರೇಷ್ಠ ಮುನಿಗಳ ಅವಾಸಸ್ಥಾನವೂ ಹಾಗೂ ಹಲವು ಧರ್ಮಗಳ ಕೇಂದ್ರವಾಗಿ ಇತಿಹಾಸದ ಪುಟಗಳಲ್ಲಿ ಕಾಣಿಸಿಕೊಂಡಿದೆ. ಮೇಲಿನ ಶಾಸನದ ವಿವರಣೆ ನೀಡುವುದಾದರೆ ಜೈನಧರ್ಮದ ಪ್ರೌಢಾವಸ್ತೆಯ ತಾಣವಾಗಿ ಮೆರೆದ 'ಕೂಹುಂಡಿ ಮೂಸಾಸಿರ' ನಾಡಿಗೆ ರತ್ನಸಮಾನವಾಗಿ ಪೂವಿನಬಾಗ ಇತ್ತೆಂಬುದು ಇಂದು ಸತ್ಯಕ್ಕೆ ದೂರವೆನಿಸಿದರೂ ಹಿಂದೊಮ್ಮೆ ಅಂಥ ಸ್ಥಾನವನ್ನು ಹೊಂದಿತ್ತೆಂಬುದು ಕೂಡ ಅಷ್ಟೇ ಸತ್ಯ. ಇಂಥ ಪೂವಿನಬಾಗ ರಾಯಬಾಗವಾಗಿ ಮಾರ್ಪಟ್ಟಿದ್ದು ಇನ್ನೂ ರಸವತ್ತಾಗಿದೆ. ಮೂಲದಲ್ಲಿ ನಿಸರ್ಗ ಸೌಂದರ್ಯದ ಧಾಮವಾಗಿ ವಿವಿಧ ಹೂವಿನ ಅಂದರೆ ಸಂಪಿಗೆ, ಮಲ್ಲಿಗೆ, ಸೇವಂತಿಗೆ, ಶಿರಿಷ ಹೂಗಳ ತೋಟವೆನಿಸಿಕೊಂಡ ಇಂದಿನ ರಾಯಬಾಗವನ್ನು ಈ ಪಟ್ಟಣದ ನಿವಾಸಿಯಾದ ೧೨ನೆಯ ಶತಮಾನದ ಕವಿ ರಾಜಾದಿತ್ಯ ತನ್ನ ಕಾವ್ಯದಲ್ಲಿ 'ಕೂಂಡಿಮಂಡಲಕ್ಕನುಪಮಂ ಪೂವಿನಬಾಗ'[೫] ಎಂದು ವರ್ಣಿಸುತ್ತ ಅಷ್ಟದಿಕ್ಕುಗಳಲ್ಲಿಯೂ ಕಣ್ಣಿಗೆ ತಂಪನ್ನಿಡುವ ವೃಕ್ಷಗಳ ರಾಶಿಯನ್ನೇ ಹೊಂದಿದ ಬಾಗಿಯೂ ಪೂವಿನಬಾಗಿಯೆಂಬ ಹೆಸರಿನಿಂದ ಚೆಲುವಾಗಿತ್ತೆಂಬುದಾಗಿ ಕವಿ ಹೇಳಿದ್ದಾನೆ. ಇಂತಹ ಪೂವಿನಬಾಗಿಯು ಅಂದು ಪೇಶ್ವೆಯರ ಆಳ್ವಿಕೆಯಲ್ಲಿ ಕೊಲ್ಹಾಪುರ ಸಂಸ್ಥಾನದಲ್ಲಿ ವಿಲೀನಗೊಂಡಿದ್ದು ಐತಿಹಾಸಿಕ ಸತ್ಯ.

---

೪. ಡಾ. ಶಿ.ಬಾ.ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಧಾರವಾಡ, ೧೯೯೫, ಪು. ೩೪., ಎಸ್.ಆಯ್.ಆಯ್. - ೨೦.
೫. ಹೊಂಬೆಳಕು, ವಾರ್ಷಿಕ ಸಂಚಿಕೆ, ಪು. ೧೧.

ಮೂಲತಃ ರಾಯಬಾಗವು ಈಗಿನ ಊರ ಪಶ್ಚಿಮಕ್ಕಿದ್ದು ಸ್ಥಳಾಂತರಗೊಂಡಿದೆ. ಈಗಲೂ ಅಲ್ಲಿ ಅವಶೇಷಗಳು ಸಿಗುತ್ತವೆ. ಈ ಸ್ಥಳಾಂತರಕ್ಕೆ ಒದು ಸ್ವಾರಸ್ಯಕರವಾದ ಹಿನ್ನೆಲೆ ಇದೆ.

ಒಂದು ಸಲ ಈ ಊರ ಶ್ರೀಮಂತನ ಮಗಳು ಹಾಗೂ ರಾಯ(ರಾಜ)ನ ಮಗಳು ಸಂತೆಗೆ ಹೋಗಿದ್ದರಂತೆ ಪೇಟೆಯಲ್ಲಿ ಒಂದು ಉನ್ನತ ಗಾತ್ರದ ರುಚಿಕಟ್ಟಾದ ಕುಂಬಳಕಾಯಿ ಇಬ್ಬರಿಗೂ ಇಷ್ಟವಾಗುತ್ತದೆ. ಅದನ್ನು ಪಡೆಯಲು ಸ್ಪರ್ಧೆ ಆರಂಭವಾಗುತ್ತದೆ. ಅವರಿಬ್ಬರಲ್ಲಿ ಯಾರು ಸೋಲುವಂತಿಲ್ಲ. ಬಹಿರಂಗ ಸವಾಲಿನಲ್ಲಿ ಶ್ರೀಮಂತನ ಮಗಳು ಹೆಚ್ಚು ದುಡ್ಡುಕೊಟ್ಟು ಕುಂಬಳಕಾಯಿಯೊಂದಿಗೆ ಮನೆಗೆ ಹಿಂದಿರುಗುತ್ತಾಳೆ. ಇತ್ತಕಡೆ ಅವಮಾನಿತಳಾದ ರಾಯ(ರಾಜ)ನ ಮಗಳು ಈ ಸುದ್ದಿಯನ್ನು ತಂದೆಗೆ ಮುಟ್ಟಿಸಿದ್ದೇ ತಡ ರಾಜನು ಕುಪಿತನಾಗಿ ತನ್ನ ಪ್ರಜೆಯಿಂದಲೇ ತನಗೆ ಅನುಮಾನವೆ? ಇದನ್ನು ಸಹಿಸಲಿಕ್ಕೆ ಸಾಧ್ಯವಿಲ್ಲ. ಸೂರ್ಯನು ಉದಯಿಸುವುದಕ್ಕೆ ಮೊದಲೇ ಊರನ್ನು ತೆರವು ಮಾಡಬೇಕು. ಇಲ್ಲವಾದರೆ ಎಲ್ಲರ ರುಂಡಗಳನ್ನು ಚೆಂಡಾಡುತ್ತೇನೆಂದು ಸಾರಿ ಈ ಕಾರ್ಯಕ್ಕೆ ಸಿದ್ಧನಾದನು. ಹೆದರಿದ ಶ್ರೀಮಂತನ ಕುಟುಂಬ ಹಾಗೂ ಇತರೆ ಗ್ರಾಮಸ್ಥರು ಕಂಡ ಕಂಡತ್ತ ಪಲಾಯನ ಮಾಡಿದರು. ಕೆಲ ಕುಟುಂಬಗಳು ಈಗ ಇರುವ ಸ್ಥಳದಲ್ಲಿಯೇ ನೆಲೆಸಿದರು. ಈ ಸ್ಥಳವೇ ಅಂದರೆ ರಾಯ(ರಾಜ)ನು ನೆಲೆನಿಂತ ತೋಟ(ಭಾಗ)ವೇ ರಾಯಬಾಗವಾಯಿತು. ಇದಕ್ಕೆ ಹಿನ್ನೆಲೆಯಾಗಿ ಸಂಕೇಶ್ವರದ 'ಸಂಕನಾಥ' ಬಿದ್ರಾಪೂರದ 'ಕೋಪನಾಥ', ಬಾಗಿಯ 'ಬಂಕನಾಥ' ಮಂದಿರಗಳನ್ನು ದೈತ್ಯರು ಒಂದೇ ರಾತ್ರಿಯಲ್ಲಿ ಕಟ್ಟಿಸಿದರೆಂಬ ವದಂತಿಯು ಜನರಿಂದ ಜನರಿಗೆ ಹರಡಿರುವುದನ್ನು ಗಮನಿಸಬಹುದಾಗಿದೆ.

ರಾಯಬಾಗದ ಮೊದಲ ಹೆಸರು 'ಪೂವಿನಬಾಗ' ಇಲ್ಲವೇ 'ಬಾಗ' ಎಂಬುದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೧೧೮೫ ರ ಹನ್ನಿಕೇರಿಯ ಶಾಸನದಲ್ಲಿ 'ತೆಂಕಲುಬಾಗಿ' ಎಂದು ಕರೆಯಲಾಗಿದೆ. ಇದಂದು ಘಟಿಕಾಸ್ಥಾನವೂ ಹೌದು. ಈ ಪ್ರದೇಶದ ಕವಿ ರಾಜಾದಿತ್ಯನು ಸಹ ಈ ಊರನ್ನು ಅಗಳನಾಡಿನ ಭಾಗವಾದ 'ಪೂವಿನಬಾಗ'ವೆಂದು ಕರೆದಿದ್ದಾನೆ.[೬] ಒಟ್ಟಿನಲ್ಲಿ ಪೂವಿನಬಾಗ, ಹೂವಿನಬಾಗೆ, ತೆಂಕಲುಬಾಗಿ, ರಾಯಬಾಗವಾಗಿ ಜನರೂಢಿಯಲ್ಲಿ ಬಾಗಿ ಎಂದಾಗಿದೆ. ಅಂದಿನ ಕಾಲದಲ್ಲಿ ಈ ಪ್ರದೇಶದಲ್ಲಿ ಶಿರಿಷ ಹೂಗಳು ಹೇರಳವಾಗಿದ್ದುದರ ಅನ್ವರ್ಥಕನಾಮವಾಗಿ ಈ ಹೆಸರು ಬಂದಿದೆ. ಅದರ ಜೊತೆಗೆ ಜಾಜಿ, ಸೇವಂತಿಗೆ, ಸಂಪಿಗೆ, ಮಲ್ಲಿಗೆ ಮುಂತಾದ ಹೂಗಳೂ ಇಲ್ಲಿ ಬೆಳೆಯುತ್ತಿದ್ದವು.

---

೬. ಡಾ. ಎಸ್.ರಾಜಶೇಖರ: ಕರ್ನಾಟಕದ ವಾಸ್ತುಶಿಲ್ಪ ಪರಿಚಯ, ಪು. ೫.

ಮಳಖೇಡದ ರಾಷ್ಟ್ರಕೂಟರಿಗೆ, ಕಲ್ಯಾಣದ ಚಾಲುಕ್ಯರಿಗೆ ಹಾಗೂ ಕಲ್ಯಾಣದ ಕಲಚೂರ್ಯರಿಗೆ ಮಾಂಡಲಿಕರಾಗಿ ಮತ್ತು ಕೆಲಕಾಲ ಸ್ವತಂತ್ರವಾಗಿ ಸುಮಾರು ೩೦೦ ವರ್ಷಗಳ ಕಾಲ ಅಂದರೆ ಕ್ರಿ.ಶ. ೯೩೦ ರಿಂದ ೧೨೩೦ ರವರೆಗೆ 'ಕೂಹುಂಡಿ ಮೂಸಾಸಿರ' ೨೦೦೦ ಮಂಡಲವನ್ನು 'ಸೌಂದತ್ತಿಯ ರಟ್ಟರು' ಆಳಿದರು.

**ಭೌಗೋಳಿಕ ವ್ಯಾಪ್ತಿ :**

ಭೌಗೋಳಿಕವಾಗಿ ಹಲವಾರು ಪ್ರಮುಖ ತಾಲೂಕು ಸ್ಥಳಗಳನ್ನು ಹೊಂದಿರುವ 'ಕುಂತಣಬಾಗೆ' ತನ್ನದೇಯಾದ ಮಹತ್ವವನ್ನು ಪಡೆದಿದೆ. ಕುಕಣೂರ (ಈಗಿನ ಕಂಕಣವಾಡಿ) ಕೇಂದ್ರವಾಗಿಯೂ, ರಟ್ಟರ ಉಪರಾಜಧಾನಿಯಾಗಿಯೂ ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ. ಕುಂತನಬಾಗಿಯ ಭೌಗೋಳಿಕ ಮೇರೆಗಳೆಂದರೆ -

| | | |
|---|---|---|
| ಕುಂತಣಬಾಗೆಯ ಉತ್ತರಕ್ಕೆ | - | ಅಥಣಿ ತಾಲೂಕು |
| ದಕ್ಷಿಣಕ್ಕೆ | - | ಗೋಕಾಕ ತಾಲೂಕು |
| ಪೂರ್ವಕ್ಕೆ | - | ಜಮಖಂಡಿ ಮತ್ತು ಮುಧೋಳ ತಾಲೂಕು |
| ಪಶ್ಚಿಮಕ್ಕೆ | - | ಚಿಕ್ಕೋಡಿ ತಾಲೂಕು |
| ವಾಯುವ್ಯಕ್ಕೆ | - | ಕಾಗವಾಡ |
| ಈಶಾನ್ಯಕ್ಕೆ | - | ತೇರದಾಳ |
| ಆಗ್ನೇಯಕ್ಕೆ | - | ಮಹಾಲಿಂಗಪೂರ ಮತ್ತು ಮೂಡಲಗಿ |
| ನೈಋತ್ಯಕ್ಕೆ | - | ಬಾಗೇವಾಡಿ, ಹುಕ್ಕೇರಿ ತಾಲೂಕುಗಳು. |

ಈ ಪ್ರದೇಶದಲ್ಲಿ ದೊರೆತ ಶಾಸನಗಳು ಇಲ್ಲಿನ ಭೌಗೋಳಿಕ ಪರಿಸರ, ಭೂಮಿಯ ಫಲವತ್ತತೆ ಹಾಗೂ ಬೆಳೆಗಳ ಬಗ್ಗೆ ವಿಫುಲ ಮಾಹಿತಿ ಒದಗಿಸುತ್ತವೆ. ಕುಂತಣಬಾಗೆ ಪ್ರದೇಶವು 'ಸಮಶೀತೋಷ್ಣ' ವಾತಾವರಣದಿಂದ ಕೂಡಿದೆ. ಇಲ್ಲಿನ ಭೂಭಾಗ ಕೆಂಪು ಹಾಗೂ ಕಪ್ಪು ಮಣ್ಣಿನಿಂದ ಆವೃತವಾಗಿದೆ. ಹೆಚ್ಚಿನ ಭೂಮಿ ವ್ಯವಸಾಯಕ್ಕೆ ಬಳಕೆಯಾಗಿದ್ದು ಉಳಿದದ್ದು ಅರಣ್ಯದಿಂದ ಕೂಡಿದೆ. ಸ್ವಲ್ಪ ದೂರವೆನಿಸಿದರೂ ಕೃಷ್ಣಾ ಹಾಗೂ ಘಟಪ್ರಭಾ ನದಿಗಳು ಈ ಪ್ರದೇಶವನ್ನು ಆವರಿಸಿವೆ. ಕೆರೆ, ಕಾಲುವೆ ಹಾಗೂ ಕೊಳವೆಬಾವಿಗಳಿಂದ ಈ ಪ್ರದೇಶ ನೀರಾವರಿ ಕ್ಷೇತ್ರವಾಗಿ ಪರಿಣಮಿಸಿದೆ. ಇಲ್ಲಿನ ಪ್ರಮುಖ ಬೆಳೆಗಳೆಂದರೆ ಕಬ್ಬು, ಗೋಧಿ,

ಬಾಳೆ, ಗೋವಿನಜೋಳ, ಕಡಲೆ, ಎಣ್ಣೆಬೀಜಗಳು ಹಾಗೂ ದ್ವಿದಳ ದಾನ್ಯಗಳನ್ನು ಬೆಳೆಯಲಾಗುತ್ತದೆ. ಇತ್ತೀಚೆಗೆ ಕಬ್ಬು, ಅರಿಶಿಣದಂತಹ ಆರ್ಥಿಕ ಬೆಳೆಯನ್ನು ಬೆಳೆಯಲಾಗುತ್ತದೆ.[೭]

**ಆಡಳಿತ ವ್ಯವಸ್ಥೆ :**

ಈಗಿನ ರಾಜ್ಯ, ಜಿಲ್ಲೆ, ತಾಲೂಕುಗಳಂತೆ ಪ್ರಾಚೀನ ಕಾಲದಲ್ಲಿಯೂ ಸಹ ರಾಜರುಗಳು ತಮ್ಮ ಸಾಮ್ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ವಿಭಾಗಿಸಿರುವುದು ತಿಳಿದುಬರುತ್ತದೆ. ಮಧ್ಯಕಾಲೀನ ಕರ್ನಾಟಕದ ಇತಿಹಾಸದಲ್ಲಿ ಸಾಮ್ರಾಜ್ಯಗಳನ್ನು ವ್ಯವಸ್ಥಿತವಾಗಿ ಅನೇಕ ಪ್ರಾಂತ್ಯಗಳಲ್ಲಿ ವಿಂಗಡಿಸಿದ್ದುದು ಕಂಡುಬರುತ್ತದೆ. ಈ ಪ್ರಾಂತ್ಯಗಳನ್ನು ಶಾಸನಗಳು, ಮಂಡಲ, ನಾಡು, ಕಂಪಣ, ವಿಷಯ ಎಂಬುದಾಗಿ ತಿಳಿದುಬರುತ್ತದೆ. ಒಂದು ಪ್ರದೇಶ ನಾಡಾಗಿಸಿಕೊಳ್ಳಬೇಕಾದರೆ ಅದಕ್ಕಿರುವ ಅರ್ಹತೆಗಳೇನು? ಎಂಬುದನ್ನು ಅವು ತಿಳಿಸುವುದಿಲ್ಲ.

ಸಾಮಾನ್ಯವಾಗಿ ಆಡಳಿತ ವಿಭಾಗಗಳನ್ನು ಆಯಾ ವಿಭಾಗಗಳ ಹೆಸರಿನಿಂದಲೇ ಕರೆಯಲಾಗುತ್ತಿತ್ತು. ಉದಾ : ಕೂಹುಂಡಿ ಮೂಸಾಸಿರ, ಕಂಕಣೂರ-೭೦, ಮುಂತಾದವು. ಇವುಗಳಲ್ಲಿರುವ ಅಂಕಿ-ಸಂಖ್ಯೆಗಳ ಬಗ್ಗೆ ವಾದ ವಿವಾದಗಳು ನಡೆದೇ ಇವೆ. ಕರ್ನಾಟಕದಲ್ಲಿ ಆಡಳಿತ ನಡೆಸಿದ ಅರಸು ಮನೆತನಗಳ ಆಡಳಿತ ವ್ಯವಸ್ಥೆಯಲ್ಲಿ ಯಾವುದೇ ರೀತಿಯ ಬದಲಾವಣೆ ಕಂಡುಬರುವುದಿಲ್ಲ. ರಾಜಧಾನಿಯ ಸುತ್ತಲಿನ ಪ್ರದೇಶವು ನೇರವಾಗಿ ರಾಜನ ಆಳ್ವಿಕೆಗೊಳಪಟ್ಟಿತ್ತು. ರಾಜ್ಯದ ಉಳಿದ ಭಾಗಗಳನ್ನು ಮಂಡಲಗಳಾಗಿ ವಿಭಾಗಿಸ್ಸುದ ಮಹಾಮಂಡಲೇಶ್ವರರು ಅವುಗಳ ಮುಖ್ಯಸ್ಥರಾಗಿದ್ದರು. ನಾಡಿನ ಉಪವಿಭಾಗವಾದ ಕಂಪಣಗಳಿಗೆ ಪ್ರಭುಗಾವುಂಡ ಅಥವಾ ಗಾವುಂಡರು ಇರುತ್ತಿದ್ದರು. ಇನ್ನು ಆಡಳಿತದ ಕೊನೆಯ ಘಟಕವಾದ ಗ್ರಾಮ ಅಥವಾ ಹಳ್ಳಿಗೆ ಗ್ರಾಮದ ಹಿರಿಯ(ಗೌಡ)ನು ಮುಖ್ಯಸ್ಥನಾಗಿರುತ್ತಿದ್ದನು.

ಸಾಮ್ರಾಜ್ಯದ ಆಡಳಿತ ನಿರ್ವಹಣೆಯಲ್ಲಿ ಅರಸನಿಗೆ ಸಹಾಯಕರಾಗಿ ಅನೇಕ ಮಂತ್ರಿಗಳು, ಅಧಿಕಾರಿಗಳು ಇದ್ದರು. ಶಾಸನಗಳಲ್ಲಿ ಕಂಡುಬರುವವರೆಂದರೆ ಮಹಾಪ್ರಧಾನ, ಸೇನಾಧಿಪತಿ, ಸುಂಕದಧಿಕಾರಿ, ಮನೆವೆರ್ಗಡೆ, ಧರ್ಮಾಧಿಕಾರಿ. ಕನ್ನಡದ ಶಾಸನಗಳಲ್ಲಿ ಮಹಾಸಾಮಂತರೂ ಹಾಗೂ ಮಹಾಮಂಡಳೇಶ್ವರ ನಡುವಿನ ವ್ಯತ್ಯಾಸ ಸ್ಪಷ್ಟವಾಗಿ ತಿಳಿದುಬಂದಿಲ್ಲ. 'ಸಾಮಂತ' ಎಂಬ ಪದಕ್ಕೆ ಒಬ್ಬ ರಾಜನಿಗೆ ಅಧೀನರಾಗಿರುವ ಒಬ್ಬ ಮಾಂಡಲಿಕ ಎಂಬ ಅರ್ಥವಿದೆ. 'ನಾಡು' ಎಂಬುದು ಹಲವು

೭. ಡಾ. ಸೂರ್ಯನಾಥ ಕಾಮತ : ಬೆಳಗಾವಿ ಜಿಲ್ಲಾ ಗೆಜೆಟಿಯರ್.

ಗ್ರಾಮಗಳನ್ನೊಳಗೊಂಡ ಆಡಳಿತದ ಭಾಗ. ಇಲ್ಲಿನ ಮುಖ್ಯಸ್ಥ ಎಂದರೆ 'ನಾಳ್ಗಾವುಂಡ' ಎಂಬುವರು. ಶಾಸನಗಳಲ್ಲಿ ಮಹಾಸಾಮಂತರನ್ನು 'ಮನ್ನೆಯ'ರೆಂದು ಕರೆಯಲಾಗಿದೆ. ಗೌರವಕ್ಕೆ ಪಾತ್ರನಾದವನು ಮನ್ನಣೆಗೆ ಯೋಗ್ಯನಾದವನು ಎಂದು. ಪ್ರಭುಗಾವುಂಡರೆಂದರೆ ಊರಿನ ಪ್ರಮುಖ ಅಥವಾ ಹಿರಿಯ. ಇವರು ಗಾವುಂಡನಿಗಿಂತ ಮೇಲಿನ ಅಧಿಕಾರಿ. ಪ್ರಭುವರ್ಗಕ್ಕೆ ಸೇರಿದ ಇವರು ಮಹಾಸಾಮಂತರಿಗೆ ಅಧೀನರಾಗಿದ್ದು ತಮ್ಮ ಪ್ರಭುತ್ವಕ್ಕೊಳಪಟ್ಟ ಗ್ರಾಮಗಳನ್ನು ಆಳುತ್ತಿದ್ದರು. ಇವರ ಒಡೆತನಕ್ಕೆ ಇಷ್ಟೇ ಗ್ರಾಮಗಳಿರಬೇಕೆಂಬ ನಿಯಗಳೇನೂ ಇರಲಿಲ್ಲ. ಗ್ರಾಮಗಳ ಆಡಳಿತ, ದೇವಾಲಯ, ಮಠ, ಬಸದಿ ಮೊದಲಾದ ಸಾರ್ವಜನಿಕ ಕ್ಷೇತ್ರಗಳಿಗೆ ಬಿಟ್ಟ ದಾನದತ್ತಿಗಳನ್ನು ರಕ್ಷಿಸುವುದು ಇವರ ಕರ್ತವ್ಯಗಳಾಗಿದ್ದವು. ಅದೇ ರೀತಿ ಗ್ರಾಮದ ಆಡಳಿತವನ್ನು ನೋಡಿಕೊಳ್ಳುವವರು ಗಾವುಂಡರು. ಇಂದಿನ ಗೌಡರೆ ಹಿಂದೆ ಗಾವುಂಡರೆನಿಸಿದ್ದರು. ಗ್ರಾಮದ ವಿಸ್ತಾರದ ಮೇಲೆ ಇವರ ಸಂಖ್ಯೆ ನಿರ್ಧಾರಿತವಾಗುತ್ತಿತ್ತು.[೮]

ಶಾಸನಗಳಲ್ಲಿ ಅಧಿಕಾರಿಗಳ ಉಲ್ಲೇಖ ಕಂಡುಬರುತ್ತದೆ. ಇವುಗಳಲ್ಲಿ ಪದವಿ, ಶ್ರೇಣಿ, ಹುದ್ದೆ ಎಂಬುದಾಗಿ ವರ್ಗೀಕರಿಸಲಾಗಿದೆ. ಮಹಾಪ್ರಧಾನ, ಸಚಿವ, ಮಂತ್ರಿ, ಮಹಾಪ್ರಚಂಡ, ದಂಡನಾಯಕ, ರಾಜ್ಯಾಧ್ಯಕ್ಷ, ಪೆರ್ಗಡೆ, ಕರಣಿಕ, ಸೇನಬೋವ, ಇವರ ಕರ್ತವ್ಯಗಳೆಂದರೆ ಅರಸರ ಅಧೀನದಲ್ಲಿ ಆಸ್ಥಾನದ ಅರಮನೆಗಳಲ್ಲಿ ಸೇವೆ ಸಲ್ಲಿಸುವುದು.[೯]

**ಮಂತ್ರಿಮಂಡಲ :**

ಪ್ರಾಚೀನ ಕರ್ನಾಟಕದ ದೊರೆಗಳು ದೊಡ್ಡ ಸೈನ್ಯವನ್ನು ಕಟ್ಟಿದ್ದರು. ರಾಜ್ಯವನ್ನಾಳುತ್ತಿದ್ದುದು ಸೈನ್ಯದಿಂದಲ್ಲ. ನಾಗರಿಕ ಅಧಿಕಾರಿಗಳ ಬಲದಿಂದ. ಅಂತಹ ಆಡಳಿತವನ್ನು 'King in Ministry' ಎಂದು ವರ್ಣಿಸಬಹುದು. ಅಂದರೆ ರಾಜನು ತನ್ನ ಮಂತ್ರಿಗಳ ಮೂಲಕ ಆಡಳಿತವನ್ನು ನಡೆಸುತ್ತಿದ್ದನು. ಕೌಟಿಲ್ಯನ ಅಭಿಪ್ರಾಯದಲ್ಲಿ ಎಂಥವರನ್ನು ಮಂತ್ರಿಗಳನ್ನಾಗಿ ಆರಿಸಬೇಕೆಂದರೆ ವ್ಯಕ್ತಿಗಳು ಯಾರೇ ಆಗಿರಲಿ ಅವರು ಉತ್ತಮ ವಂಶಸಂಭೂತರೂ, ವಿವೇಕಿಗಳೂ, ಧೀರರೂ, ಪ್ರಾಮಾಣಿಕರೂ ಆಗಿದ್ದರೆ ಅವರು ಯೋಗ್ಯರು. ಒಟ್ಟಿನಲ್ಲಿ ಮಂತ್ರಿಗಳ ಆಯ್ಕೆಯು ಸಂಪೂರ್ಣ ಯೋಗ್ಯತೆಯನ್ನು ಅವಲಂಬಿಸಿರಬೇಕು. ಈ ಮಂತ್ರಿಮಂಡಲವು ಅರಸನಿಗೆ ಆಧಾರಸ್ತಂಭಗಳಂತಿದ್ದು ರಾಜ್ಯದ ಆಡಳಿತದಲ್ಲಿ ಸಲಹೆ, ಸೂಚನೆ ಹಾಗೂ

---

೮. ಡಾ. ಎ.ಎಸ್. ಅಲ್ಟೇಕರ್ : ವಿಜಯನಗರ ಸಾಮ್ರಾಜ್ಯ, ಪು. ೨೦.
೯. ಎಸ್.ಆಯ್.ಆಯ್. - ೨೦.

ಪರಿಹಾರೋಪಾಯಗಳನ್ನು ನೀಡುತ್ತಿತ್ತು. ಅಲ್ಲದೇ ಸರ್ವಾಧಿಕಾರಿಯಾದ ಅರಸನು ನಿರಂಕುಶಮತಿ-ಯಾಗದಂತೆ ನಿಯಂತ್ರಿಸುತ್ತಿತ್ತು.

ಸಂಧಿವಿಗ್ರಹಿ ಈಗಿನ ವಿದೇಶಾಂಗ ಸಚಿವನಿದ್ದಂತೆ ಶತ್ರುಗಳೊಡನೆ ಸಂಧಾನ ಅಥವಾ ಯುದ್ಧ ಈ ವಿಷಯಗಳಲ್ಲಿ ಪ್ರಸಿದ್ಧ ವಿದೇಶಾಂಗ ವ್ಯವಹಾರಗಳ ಜೊತೆಗೆ ದಾನಪತ್ರಗಳ ಮೇಲ್ವಿಚಾರಣೆ, ಪರ ರಾಷ್ಟ್ರಗಳಿಂದ ಬಂದ ದೂತರನ್ನು ಸ್ವಾಗತಿಸುವುದು ಮುಂತಾದವು ಇವನ ಕರ್ತವ್ಯ.[೧೦]

ಈ ರೀತಿಯಾಗಿ ಕುಂತಣಬಾಗೆಯ ಪ್ರಾಚೀನತೆ, ಭೌಗೋಳಿಕ ವ್ಯಾಪ್ತಿ, ಆಡಳಿತ ವ್ಯವಸ್ಥೆಗಳನ್ನು ಪ್ರಾಚೀನ ಸಾಹಿತ್ಯ, ಶಾಸನಾಧಾರಗಳಿಂದ ತಿಳಿದುಕೊಳ್ಳಬಹುದಾಗಿದೆ.

---

೧೦. ಡಾ. ಆರ್.ಡಿ. ಶರ್ಮಾ : ಕೌಟಿಲ್ಯನ ಅರ್ಥಶಾಸ್ತ್ರ, ಪು. ೩೯.

## ಅಧ್ಯಾಯ : ಮೂರು

# ರಾಜಕೀಯ ಚರಿತ್ರೆ

ಅಧ್ಯಯನದ ಕೇಂದ್ರಸ್ಥಳವಾದ 'ಕುಂತಣಬಾಗೆ'ಯು ಕುಹೂಂಡಿ ಮೂಸಾಸಿರವಾಗಿದೆ. ಇಂಥ ಆಡಳಿತ ಘಟಕವು ಪ್ರಾಚೀನ ಕರ್ನಾಟಕದ ಒಂದು ಚಿಕ್ಕ ಭಾಗವಾಗಿರುವುದರಿಂದ ಕರ್ನಾಟಕದ ರಾಜಕೀಯ ಚರಿತ್ರೆ ವಿಶಾಲಾರ್ಥದಲ್ಲಿ ಈ ಕುಹೂಂಡಿ ಮೂಸಾಸಿರ ಭಾಗಕ್ಕೂ ಅನ್ವಯವಾಗುತ್ತದೆ. ಪ್ರಾಚೀನ ಕರ್ನಾಟಕದಲ್ಲಿ ವಿವಿಧ ರಾಜಕೀಯ ವಿಭಾಗಗಳು ಪ್ರತ್ಯೇಕ ಹೆಸರುಗಳಿಂದ ಗುರುತಿಸಲ್ಪಡುತ್ತಿದ್ದವು. ಅವುಗಳಲ್ಲಿ ಇಂದಿನ ಬೆಳಗಾವಿ ಜಿಲ್ಲೆಯ ದಕ್ಷಿಣ ಭಾಗ, ಪೂರ್ವ ಭಾಗ ಬಾಗಲಕೋಟೆ ಜಿಲ್ಲೆಯ ಮುಧೋಳ ಮತ್ತು ಜಮಖಂಡಿ ತಾಲೂಕು, ಪಶ್ಚಿಮ ಭಾಗ ಮಹಾರಾಷ್ಟ್ರದ ಚಂದಗಡ, ಗಡಹಿಂಗ್ಲಜ ತಾಲೂಕುಗಳು ಸೇರಿ ಕುಹೂಂಡಿ ಮೂರು ಸಹಸ್ರ ಎಂಬ ಹೆಸರಿನಿಂದ ಪ್ರಸಿದ್ಧವಾಗಿದ್ದು ಸಾಕಷ್ಟು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಇಲ್ಲಿನ ದಾಖಲೆಗಳು ತಿಳಿಸುವಂತೆ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಅವರ ಸಾಮಂತರಾದ ಸುಗಂಧವರ್ತಿ ಸೌಂದತ್ತಿಯ ರಟ್ಟರು, ಕಲ್ಯಾಣದ ಚಾಳುಕ್ಯರು, ಬಿಜಾಪುರದ ಆದಿಲ್‌ಷಾಹಿಗಳು, ವಿಜಯನಗರದ ಅರಸರು ಹಾಗೂ ಮರಾಠರ ಅಧೀನಕ್ಕೊಳಪಟ್ಟು ಅನೇಕ ಸ್ಥಿತ್ಯಂತರಗಳನ್ನು ಕಂಡಿದೆ.

ಈ ಭಾಗದ ಶಾಸನಗಳು ಹಾಗೂ ಇತರೆ ಅಂಶಗಳಿಂದ ಇಲ್ಲಿ ಹಲವಾರು ರಾಜಮನೆತನಗಳು ಆಳ್ವಿಕೆ ನಡೆಸಿದ್ದು ತಿಳಿದುಬರುತ್ತದೆ. ಈ ಅರಸರು ಆಳ್ವಿಕೆ ನಡೆಸಿದ ಕಾಲಕ್ಕನುಗುಣವಾಗಿ ಆಯಾ ರಾಜಮನೆತನದ ರಾಜಕೀಯ ಇತಿಹಾಸವನ್ನು ಈ ಕೆಳಗಿನಂತೆ ವಿವರಿಸಿದೆ.

**ಪ್ರಮುಖ ರಾಜಮನೆತನಗಳು :**

**ಬದಾಮಿ ಚಾಳುಕ್ಯರು - (ಕ್ರಿ.ಶ. ೫೦೦ ರಿಂದ ೭೫೭) :**

ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದ ಮೊದಲರಾಜ ಮನೆತನವೆಂದರೆ ಬನವಾಸಿಯ ಕದಂಬರು, ಕ್ರಿ.ಶ. ೪-೬ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ ಕದಂಬರ ಅವನತಿಯ ನಂತರ ಅವರ ಸಾಮಂತರಾಗಿದ್ದ ಬದಾಮಿ ಚಾಲುಕ್ಯರು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದರು. ಈ ರಾಜ್ಯದ ಸ್ಥಾಪನೆಯಿಂದಾಗಿ ದಕ್ಷಿಣಭಾರತ ಹಾಗೂ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಒಂದು ನೂತನ ಅಧ್ಯಾಯವು

ಸ್ಥಾಪಿಸಲ್ಪಟ್ಟಿತು. ಚಾಲುಕ್ಯರ ಪರಮಾಧಿಕಾರ ಉತ್ತರದಲ್ಲಿ ನರ್ಮದಾ ತೀರದವರೆಗೆ ವ್ಯಾಪಿಸಿತ್ತು. ಹಿರಿದಾದ ಸಾಮ್ರಾಜ್ಯವನ್ನು ನಿರ್ಮಿಸಿ ಸುವ್ಯವಸ್ಥಿತ ಆಡಳಿತ ಪದ್ಧತಿಯನ್ನು ಸ್ಥಾಪಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಚಾಳುಕ್ಯ ಸಾರ್ವಭೌಮರು ಧರ್ಮ, ಸಾಹಿತ್ಯ ಮತ್ತು ಕಲೆಗೆ ವಿಶೇಷ ಪ್ರೋತ್ಸಾಹ ನೀಡಿದರು. ವೈಷ್ಣವ, ಶೈವ ಹಾಗೂ ಜೈನ ಪಂಥಗಳಿಗೆ ಚಾಲುಕ್ಯ ಅರಸರು ಜೀವ ತುಂಬಿದರು. ಸದಾ ಪ್ರಜೆಗಳ ಸಂತೋಷ ಮತ್ತು ಹಿತವನ್ನು ಗಮನದಲ್ಲಿಟ್ಟುಕೊಂಡು ರಾಜ್ಯಭಾರ ಮಾಡುತ್ತಿದ್ದರು.[೧] ಅವರು ಕೈಹಾಕದ ಸಾಂಸ್ಕೃತಿಕ ವಿಭಾಗವೇ ಇಲ್ಲವೆನ್ನಬಹುದು. ಇವರ ಆಳ್ವಿಕೆಯಲ್ಲಿ ವಾಸ್ತುಶಿಲ್ಪ ಉನ್ನತ ಸ್ಥಿತಿಗೆ ಬರಲು ಕಾರಣವಾಯಿತು. ಐಹೊಳೆ, ಬಾದಾಮಿ, ಪಟ್ಟದಕಲ್ಲು, ಮಹಾಕೂಟ ಮೊದಲಾದ ಸ್ಥಳಗಳಲ್ಲಿರುವ ಚಾಲುಕ್ಯರ ಕಲಾಕೃತಿಗಳು ಅವರ ಅದ್ಭುತ ವೈಭವ ಮತ್ತು ಹಿರಿಮೆಗೆ ಇಂದಿಗೂ ಸಾಕ್ಷಿಯಾಗಿ ಉಳಿದಿವೆ. ಈ ಅರಸರ ಉದಾರತೆಯಿಂದ ಬೆಳೆದ ವಾಸ್ತುಶಿಲ್ಪವು 'ವೇಸರ ಶೈಲಿ' ಎಂಬುದಾಗಿ ಭಾರತೀಯ ವಾಸ್ತುಶಿಲ್ಪ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ.[೨] 'ವರಾಹ'ವು ಈ ಸಂತತಿಯ ರಾಜಚಿಹ್ನೆಯಾಗಿತ್ತು.

ಸ್ವತಂತ್ರವಾದ ಚಾಲುಕ್ಯವಂಶಶನ್ನು ಸ್ಥಾಪಿಸಿದ ಕೀರ್ತಿ ರಣರಾಗನ ಮಗನಾದ ೧ನೇ ಪುಲಕೇಶಿ (ಕ್ರಿ.ಶ. ೫೪೭ ರಿಂದ ೫೬೭) ಗೆ ಸಲ್ಲುತ್ತದೆ. ಇವನು ವಾತಾಪಿಯನ್ನು ರಾಜಧಾನಿಯನ್ನಾಗಿ ಆಯ್ದುಕೊಂಡ ವಿಷಯ ಈತನ ಬಂಡೆಗಲ್ಲು ಶಾಸನದಿಂದ ತಿಳಿದುಬರುತ್ತದೆ.[೩] ನಂತರದಲ್ಲಿ ವಾತಾಪಿ ನಗರದ ಸುತ್ತಮುತ್ತ ಚಾಲುಕ್ಯರ ಅನೇಕ ಸ್ಮಾರಕಗಳು ತಲೆಎತ್ತಿದವು. ಏಕೆಂದರೆ ವಾತಾಪಿಯ ಪ್ರಕೃತಿ ಸಹಜವಾದ ರಕ್ಷಣೆಯನ್ನು ಪಡೆದಿತ್ತು. ೧ನೇ ಪುಲಕೇಶಿಗೆ ಕೀರ್ತಿವರ್ಮ ಮತ್ತು ಮಂಗಳೇಶರೆಂಬ ಈರ್ವರು ಮಕ್ಕಳಿದ್ದರು. ತಂದೆಯ ಮರಣದ ನಂತರ ೧ನೇ ಕೀರ್ತಿವರ್ಮ ಕ್ರಿ.ಶ. ೫೬೭ ರಲ್ಲಿ ಪಟ್ಟವೇರಿದನು. ಕೀರ್ತಿವರ್ಮನು ಪರಾಕ್ರಮದಿಂದ ರಾಜ್ಯದ ಮೇರೆಗಳನ್ನು ವಿಸ್ತರಿಸಿ ತನ್ನ ಪ್ರಭಾವ ಹಾಗೂ ಪ್ರತಿಷ್ಠೆಗಳನ್ನು ಹೆಚ್ಚಿಸಿಕೊಂಡು ಮುಂದಿನ ವೈಭವಯುಗಕ್ಕೆ ಭದ್ರ ಅಡಿಪಾಯ ಹಾಕಿದನು.

ಕೀರ್ತಿವರ್ಮನ ನಂತರ ಮಂಗಳೇಶ ಕ್ರಿ.ಶ. ೫೯೮ರಲ್ಲಿ ಅಧಿಕಾರಕ್ಕೆ ಬಂದನು.[೪] ಉತ್ತಮ ಆಡಳಿತಗಾರನಾಗಿದ್ದ ಈತ ರಾಜ್ಯವನ್ನು ವಿಸ್ತರಿಸಿ ತನ್ನ ಆಳ್ವಿಕೆಯನ್ನು ಸಮರ್ಥಿಸಿಕೊಂಡನು. ವಿಷ್ಣುವಿನ ಪರಮಭಕ್ತನಾದ ಈತ ತನ್ನ ಸಹೋದರನ ಕಾಲದಲ್ಲಿ ಅಪೂರ್ಣವಾಗಿದ್ದ ಬಾದಾಮಿ ವೈಷ್ಣವ

---

೧. ದೇಸಾಯಿ, ಪಿ.ಬಿ., ಶ್ರೀನಿವಾಸ ರಿತ್ತಿ., ಬಿ.ಆರ್.ಗೋಪಾಲ: ಪ್ರಾಚೀನ ಭಾರತದ ಚರಿತ್ರೆ, ಪು. ೨೯೮.

೨. ನರಸಿಂಹಮೂರ್ತಿ. ಎ.ವಿ. ಮತ್ತು ಗುರುರಾಜರಾವ್ ಬಿ.ಕೆ. : ಪ್ರಾಚೀನ ಭಾರತ, ಪು. ೨೭೭.

೩. ಪಿ.ಬಿ.ದೇಸಾಯಿ : ದ ಹಿಸ್ಟರಿ ಆಫ್ ಕರ್ನಾಟಕ, ಪು. ೯೫.

೪. ಬಸವರಾಜ, ಕೆ.ಆರ್. : ಹಿಸ್ಟರಿ ಆ್ಯಂಡ್ ಕಲ್ಚರ್ ಆಫ್ ಕರ್ನಾಟಕ, ಪು. ೪೯-೫೦.

ಗುಹಾಲಯವನ್ನು ಪೂರ್ಣಗೊಳಿಸಿ ವಿಷ್ಣುವಿನ ವಿಗ್ರಹವನ್ನು ಸ್ಥಾಪಿಸಿ 'ಪರಮಭಾಗವತ' ಎಂಬ ಬಿರುದು ಪಡೆದನು.[೫] ಮುಂದೆ ಸಿಂಹಾಸನಕ್ಕಾಗಿ ನಡೆದ ಯಾದವಿ ಕಲಹದಲ್ಲಿ ಮಂಗಳೇಶ ರಾಜ್ಯದ ಜೊತೆಗೆ ಪ್ರಾಣವನ್ನು ಕಳೆದುಕೊಳ್ಳುವಂತಾಯಿತು.

**ಇಮ್ಮಡಿ ಪುಲಕೇಶಿ (ಕ್ರಿ.ಶ. ೬೦೯ ರಿಂದ ೬೪೨) :**

ಚಾಲುಕ್ಯ ಸಾಮ್ರಾಟರಲ್ಲೆಲ್ಲ ಅತ್ಯಂತ ಪರಾಕ್ರಮಿ ಹಾಗೂ ಪ್ರಸಿದ್ಧ ಚಕ್ರವರ್ತಿಯೆಂದರೆ ಇಮ್ಮಡಿ ಪುಲಕೇಶಿ. ಜೈನಕವಿಯಾದ ರವಿಕೀರ್ತಿ ರಚಿಸಿದ ಐಹೊಳೆ ಪ್ರಶಸ್ತಿ ಶಾಸನ (ಕ್ರಿ.ಶ. ೬೩೦-೬೩೪) ಹಾಗೂ ಹೂಯೆನ್‌ತ್ಸಾಂಗನ ಬರವಣಿಗೆಗಳು (ಕ್ರಿ.ಶ. ೬೪೧) ಪುಲಕೇಶಿಯ ಬಗ್ಗೆ ತಿಳಿಯಲು ಸಹಾಯಕವಾಗಿವೆ. ದಂಗೆಯೆದ್ದ ಮಾಂಡಲಿಕರು ಹಾಗೂ ಸಾಮಂತರನ್ನು ಸದೆಬಡಿದು ಉತ್ತರದಲ್ಲಿ ನರ್ಮದಾ ತೀರದವರೆಗೆ ರಾಜ್ಯವಿಸ್ತರಿಸಿದನು.[೬] ಗುಜರಾತವನ್ನು ಜಯಿಸಿ ತನ್ನ ಸಹೋದರನನ್ನು ಅಲ್ಲಿನ ಮುಖ್ಯಸ್ಥನಾಗಿ ನೇಮಿಸಿದನು. ಪೂರ್ವದಲ್ಲಿ ವೆಂಗಿ ಮತ್ತು ಕಳಿಂಗವನ್ನು ಜಯಿಸಿ ಮತ್ತೊಬ್ಬ ಸಹೋದರ ಕುಬ್ಜ ವಿಷ್ಣುವರ್ಧನನ್ನು ಅಲ್ಲಿಯ ಆಡಳಿತಾಧಿಕಾರಿಯಾಗಿ ನೇಮಿಸಿದನು. ಅದೇ ರೀತಿ ದಕ್ಷಿಣದಲ್ಲಿ ಪಲ್ಲವರನ್ನು ಸೋಲಿಸಿ ಕಂಚಿಯನ್ನು ವಶಪಡಿಸಿಕೊಂಡನು.

ಕ್ರಿ.ಶ. ೬೪೨ ರಲ್ಲಿ ಪಲ್ಲವರ ದೊರೆ ೧ನೇ ನರಸಿಂಹವರ್ಮ ೨ನೇ ಪುಲಕೇಶಿಯನ್ನು ಸೋಲಿಸಿದ. ಪುಲಕೇಶಿ ಹೋರಾಡುತ್ತ ರಣರಂಗದಲ್ಲಿ ಮರಣ ಹೊಂದಿದ. ಒಂದು ಸಣ್ಣ ರಾಜ್ಯದ ಸಿಂಹಾಸನವೇರಿದ ೨ನೇ ಪುಲಕೇಶಿ ಅದನ್ನು ಭವ್ಯ ಸಾಮ್ರಾಜ್ಯವನ್ನಾಗಿ, ದಕ್ಷಿಣ ಭಾರತದಲ್ಲಿ ಪ್ರಬಲ ಶಕ್ತಿಯನ್ನಾಗಿ ಮಾರ್ಪಡಿಸಿದನು. ಕದಂಬರು ಅಂಕುರಿಸಿದ ಕರ್ನಾಟಕದ ಕಲ್ಪನೆ ಹಾಗೂ ಬಾವುಕತೆಗೆ ನೀರೆರೆದು ಅದು ದೇದೀಪ್ಯಮಾನವಾಗಿ ಬೆಳಗುವಂತೆ ಮಾಡಿದ ಶ್ರೇಯಸ್ಸು ಈತನಿಗೆ ಸಲ್ಲುತ್ತದೆ. ರಾಜ್ಯದಲ್ಲಿ ಶಾಂತಿ ಸುಭದ್ರತೆ ಸ್ಥಾಪಿಸುವುದರ ಜೊತೆಗೆ ಕನ್ನಡ ನಾಡು ಕಲೆ ಸಂಸ್ಕೃತಿಗಳ ಬೀಡು ಮಾಡಿ ಚರಿತ್ರೆಯಲ್ಲಿ ತನ್ನದೇಯಾದ ಸ್ಥಾನ ಉಳಿಸಿಕೊಂಡಿದ್ದಾರೆ.[೭] ೨ನೇ ಪುಲಕೇಶಿಯ ನಂತರ ೧ನೇ ವಿಕ್ರಮಾದಿತ್ಯ ಕ್ರಿ.ಶ. ೬೫೫ ರಲ್ಲಿ ಅಧಿಕಾರಕ್ಕೆ ಬಂದನು. ೨ನೇ ವಿಕ್ರಮಾದಿತ್ಯ (ಕ್ರಿ.ಶ. ೭೩೩ ರಿಂದ ೭೪೩) ನು ಈ ವಂಶದ ಕೊನೆಯ ಪ್ರಭಲ ದೊರೆ.

---

೫. ದೇಸಾಯಿ, ಪಿ.ಬಿ., ಶ್ರೀನಿವಾಸ ರಿತ್ತಿ., ಬಿ.ಆರ್.ಗೋಪಾಲ: ಪ್ರಾಚೀನ ಭಾರತದ ಚರಿತ್ರೆ, ಪು. ೩೧೮.
೬. ಫಾಲಾಕ್ಷ : ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಪು. ೬೭.
೭. ದೇಸಾಯಿ, ಪಿ.ಬಿ., ಶ್ರೀನಿವಾಸ ರಿತ್ತಿ., ಬಿ.ಆರ್.ಗೋಪಾಲ: ಪ್ರಾಚೀನ ಭಾರತದ ಚರಿತ್ರೆ, ಪು. ೩೨೨.

## ರಾಷ್ಟ್ರಕೂಟರು (ಕ್ರಿ.ಶ. ೭೫೭ ರಿಂದ ೯೭೩) :

ಬಾದಾಮಿ ಚಾಲುಕ್ಯರ ಸಾಮಂತರಾಗಿದ್ದ ರಾಷ್ಟ್ರಕೂಟರು ಕ್ರಿ.ಶ. ೮ನೇ ಶತಮಾನದ ಮಧ್ಯಭಾಗದಲ್ಲಿ ಸ್ವತಂತ್ರ ರಾಜ್ಯ ಸ್ಥಾಪಿಸಿ ಆಳತೊಡಗಿದರು. ಚಾಲುಕ್ಯರನ್ನು ಪದಚ್ಯುತಗೊಳಿಸಿ ಕನ್ನಡ ನಾಡನ್ನು ದಕ್ಷಿಣ ಭಾರತದಲ್ಲಿ ಉಚ್ಛ್ರಾಯಸ್ಥಿತಿಗೆ ತಂದ ಕೀರ್ತಿ ಇವರಿಗೆ ಸಲ್ಲುತ್ತದೆ. ಕ್ರಿ.ಶ. ೧೦ನೇ ಶತಮಾನದ ಅಂತ್ಯದವರಗೆ ಆಳ್ವಿಕೆ ನಡೆಸಿದ ಇವರು ಕನ್ನಡ ನಾಡಿನ ಕಲೆ ಮತ್ತು ಸಂಸ್ಕೃತಿಯನ್ನು ಸಂರಕ್ಷಿಸಿ ಅದು ವಿಶಾಲವಾಗಿ ಅಭಿವೃದ್ಧಿಗೊಳ್ಳುವಂತೆ ಶ್ರಮಿಸಿದರು. ರಾಷ್ಟ್ರಕೂಟ ಅರಸರು ತಮ್ಮ ಶೌರ್ಯ, ಸಾಹಸ ಪ್ರತಿಭೆಗಳಿಂದ ಭಾರತೀಯ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಇವರ ಆಳ್ವಿಕೆಯ ಕಾಲವು ಕರ್ನಾಟಕದ ಇತಿಹಾಸದಲ್ಲಿ ಮಹತ್ವಪುರ್ಣವಾದ ಅಧ್ಯಾಯವಾಗಿದೆ. ೨ನೇ ಶತಮಾನಕ್ಕಿಂತಲೂ ಹೆಚ್ಚು ಕಾಲ ಆಳ್ವಿಕೆ ನಡೆಸಿ ಉತ್ತರ ಭಾರತದಲ್ಲಿ ತಮ್ಮ ಪ್ರಭಾವ ಬೀರಿದ್ದಷ್ಟೇ ಅಲ್ಲದೆ ಇಡೀ ಭಾರತದ ಅದೃಷ್ಟವನ್ನು ಬದಲಿಸಿದರು.[೮] ಇವರ ಕಾಲದಲ್ಲಿ ನಿರ್ಮಾಣವಾದ ಎಲ್ಲೋರ ಕೈಲಾಸನಾಥ ದೇವಾಲಯ ಹಾಗೂ ಎಲಿಫಂಟಾದ ಗುಹೆಗಳು ಪ್ರೇಕ್ಷಣೀಯ ಸ್ಥಳಗಳಾಗಿದ್ದು ದೇಶ-ವಿದೇಶಿಗರನ್ನು ಆಕರ್ಷಿಸುತ್ತವೆ. ಈ ಮನೆತನದ ದಂತಿದುರ್ಗ್ (ಕ್ರಿ.ಶ. ೭೫೩ ರಿಂದ ೭೫೬), ಒಂದನೇ ಕೃಷ್ಣ[೧೦] (ಕ್ರಿ.ಶ. ೭೫೬ ರಿಂದ ೭೭೫), ಧ್ರುವ್[೧೧] (ಕ್ರಿ.ಶ. ೭೮೦ ರಿಂದ ೭೯೩), ೩ನೇ ಗೋವಿಂದ್[೧೨] (ಕ್ರಿ.ಶ. ೭೯೩ ರಿಂದ ೮೧೪), ಅಮೋಘವರ್ಷ[೧೩] (ಕ್ರಿ.ಶ. ೮೧೪ ರಿಂದ ೮೭೮), ೩ನೇ ಕೃಷ್ಣ (ಕ್ರಿ.ಶ. ೯೬೦ ರಿಂದ ಕ್ರಿ.ಶ. ೯೭೦) ಮೊದಲಾದವರು ಪರಾಕ್ರಮಿಗಳಾಗಿದ್ದು ಉತ್ತರ ಹಿಮಾಲಯದವರೆಗೆ ಯಶಸ್ವಿ ದಿಗ್ವಿಜಯಗಳನ್ನು ನಡೆಸಿದರು. ಪ್ರಜೆಗಳ ಹಿತವನ್ನು ಗಮನದಲ್ಲಿಟ್ಟುಕೊಂಡು ಆಳ್ವಿಕೆ ನಡೆಸಿದ ಮಹಾಮಹಿಮರು. ಧಾರ್ಮಿಕ ಅಸಹಿಷ್ಣುತೆ ರಾಷ್ಟ್ರಕೂಟರ ಇತಿಹಾಸದಲ್ಲಿಯೇ ಇಲ್ಲ. ಅನ್ಯ ಧರ್ಮಗಳನ್ನು ವಿಶಾಲ ದೃಷ್ಟಿಯಿಂದ ನೋಡಿ ಗೌರವಿಸಿದ ಧೀರರು. ಶಿಕ್ಷಣ, ಸಾಹಿತ್ಯ, ಕಲೆ, ವಾಸ್ತುಶಿಲ್ಪ, ಶಿಲ್ಪಕಲೆ, ವರ್ಣಚಿತ್ರ, ಮೂರ್ತಿಶಿಲ್ಪ ಮುಂತಾದ ಎಲ್ಲ ವಿಭಾಗಗಳಲ್ಲಿ ಅವಿಸ್ಮರಣೀಯ ಸಾಧನೆ ಮಾಡಿದ್ದಾರೆ. ಕಾವೇರಿಯಿಂದ ಗೋದಾವರಿ ನದಿಯವರೆಗಿನ ವಿಶಾಲ ರಾಜ್ಯಕ್ಕೆ ಅಧಿಪತಿಗಳಾಗಿ ಆಳ್ವಿಕೆ ನಡೆಸಿದ್ದಾರೆ. ಕ್ರಿ.ಶ. ೮೫೧ ರಲ್ಲಿ ಅರಬ್ ಪ್ರವಾಸಿ ಸುಲೈಮಾನ್ ರಾಷ್ಟ್ರಕೂಟ ಆಸ್ಥಾನವನ್ನು ಸಂದರ್ಶಿಸಿ ಜಗತ್ತಿನ ನಾಲ್ಕು ಸಾಮ್ರಾಜ್ಯಗಳಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವೂ

---

೮. ಪಿ.ಬಿ.ದೇಸಾಯಿ : ಎ ಹಿಸ್ಟರಿ ಆಫ್ ಕರ್ನಾಟಕ, ಪು. ೧೧೫-೧೧೬.

೯. ಬಸವರಾಜ, ಕೆ.ಆರ್. : ಹಿಸ್ಟರಿ ಆ್ಯಂಡ್ ಕಲ್ಚರ್ ಆಫ್ ಕರ್ನಾಟಕ, ಪು. ೬೨.

೧೦. ಅದೇ, ಪು. ೬೩.

೧೧. ಪಿ.ಬಿ.ದೇಸಾಯಿ : ಎ ಹಿಸ್ಟರಿ ಆಫ್ ಕರ್ನಾಟಕ, ಪು. ೧೧೫-೧೧೬.

೧೨. ನರಸಿಂಹಮೂರ್ತಿ, ಗುರುರಾಜರಾವ್ : ಪ್ರಾಚೀನ ಭಾರತ, ಪು. ೨೮೯.

೧೩. ಷೇಕ್ ಅಲಿ, ರಂಗಸ್ವಾಮಯ್ಯ, ಜಿ.ಆರ್. : ದಕ್ಷಿಣ ಭಾರತದ ಇತಿಹಾಸ, ಪು. ೧೯೧-೧೯೨.

ಒಂದೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ಆ ಮೂಲಕ ದೇಶಿಯವಾಗಿಯಲ್ಲದೇ ವಿದೇಶಿಯವರಿಂದಲೂ ಮೆಚ್ಚುಗೆ ಪಡೆಯುವಷ್ಟು ರಾಷ್ಟ್ರಕೂಟ ಅರಸರು ಪ್ರಖ್ಯಾತಿ ಗಳಿಸಿದ್ದರು.

**ಸೌಂದತ್ತಿ ರಟ್ಟರು (ಕ್ರಿ.ಶ. ೯೩೦ ರಿಂದ ೧೨೩೦) :**

೩೦೦ ವರ್ಷಗಳ ಅವಧಿಯು ರಟ್ಟರ ಸುವರ್ಣಯುಗವೆಂದು ಪ್ರಸಿದ್ಧವಾಗಿದೆ. ಇಂದಿನ ಬೆಳಗಾವಿ ಜಿಲ್ಲೆಯ ಸವದತ್ತಿ ಇವರ ರಾಜಧಾನಿಯಾಗಿತ್ತು. ಶಾಸನವೊಂದರಲ್ಲಿ ತಿಳಿಸುವಂತೆ ಇವರ ವಂಶಾವಳಿ ಈ ಕೆಳಗಿನಂತಿದೆ.




ಈ ಮನೆತನದ ಮೊದಲ ದೊರೆ ನನ್ನ.

### ನನ್ನ :

ಈತ ಸದೃಢಕಾಯದವನಾದುದರಿಂದ 'ನನ್ನ ಭೂಪನನುಪಮರೂಪಂ'ನೆಂದು ವರ್ಣಿಸಲಾಗಿದೆ.[೧೪] ಇವನ ನಂತರ ಕತ್ತ ಅಥವಾ ಕಾರ್ತವೀರ್ಯ 'ಕುಹೂಂಡಿ ಮೂಸಾಸಿರ' ನಾಡನ್ನು ಆಳುತ್ತಿದ್ದನು. ಈತನ ಕಾಲದಲ್ಲಿ ನಾಡಿನ ಅಭಿವೃದ್ಧಿ ಪ್ರಾರಂಭವಾಯಿತು. ರಾಜ್ಯದ ವಿಸ್ತರಣೆ ವೈಭವಕ್ಕೆ ಈತ ಬುನಾದಿ ಹಾಕಿದ. ಕಮಲಾದಿತ್ಯನೆಂಬ ಕವಿ ಈತನ ಆಶ್ರಯದಲ್ಲಿದ್ದು, ಈತನು ರಚಿಸಿದ ಶಾಸನವೊಂದು ಸೊಗಲದಲ್ಲಿದ್ದು ಈ ದೊರೆಯ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ. ಶಾಸನ ತಿಳಿಸುವಂತೆ ಈ ನಾಡಿನ ಕಂಬಿಯಬ್ಬೆಯ ಸೊಗಲದಲ್ಲಿರುವ ವಿದ್ಯಾಕೇಂದ್ರದ ತಪೋವನಕ್ಕೆ ಅಲ್ಲಿಯ ಸುವರ್ಣಾಕ್ಷಿ ದೇವರಿಗೆ ದಾನ ನೀಡಿದ್ದಾಗಿ ವಿವರಿಸುತ್ತದೆ. ಕಾರ್ತವೀರ್ಯನ ಹೃದಯ ವೈಶಾಲ್ಯತೆಯಿಂದಾಗಿ ಧನವಂತ ಸ್ತ್ರೀಪುರುಷರು ಸತ್ಕಾರ್ಯಕ್ಕೆ ದಾನಧರ್ಮಕ್ಕೆ ಮನಸ್ಸುಳ್ಳವರು ಎಂಬುದು ತಿಳಿದುಬರುತ್ತದೆ.[೧೫] ಇವನ ನಂತರ ಹಿರಿಯ ಮಗ ದಾವರಿ ಪಟ್ಟಕ್ಕೆ ಬಂದನು.

### ದಾವರಿ (ದಾಯಿಗ):

''ರಾಜನ್ವತಃ ಪ್ರಜಾಜಾತ ದಾವರಿನಾಮ'' ಎನ್ನುವ ಈತ ಉತ್ತಮ ದೊರೆಯಾಗಿದ್ದನು. ರಟ್ಟ ರಾಜ್ಯವನ್ನು ವಿಸ್ತರಿಸಿ 'ರಟ್ಟರಮೇರು' ಎಂಬ ಪ್ರಶಸ್ತಿಗೆ ಪಾತ್ರನಾಗಿದ್ದನು. ಇವನನ್ನು ಮನುನಿಭನೆಂದು 'ಕಾರ್ಯನಿಧಿ', 'ದಯಾಪರ' ಎಂಬುದಾಗಿ ಶಾಸನದಲ್ಲಿ ವರ್ಣಿಸಲಾಗಿದೆ.[೧೬]

### ಕಣ್ಣ (ಕಣ್ಣಕೈರ):

'ತನ್ಯುನುತ ಪ್ರತಾಪಿಸ್ಯಾತ್ ಕನ್ನಕೈರೋ ಮಹಿಪತಿ' ಎಂದು ಸೌಂದತ್ತಿ ಶಾಸನ ತಿಳಿಸುತ್ತದೆ. ಅಣ್ಣ ದಾಯಿಗನ ನಂತರ ಅಧಿಕಾರಕ್ಕೆ ಬಂದ ಈತನು ಧೀರನೂ, ಉದಾರಿಯೂ ಆಗಿದ್ದನು.

### ಎರಗ (ಕ್ರಿ.ಶ. ೧೦೪೦):

ಕಲ್ಯಾಣ ಚಾಲುಕ್ಯ ದೊರೆ ೨ನೇ ಜಯಸಿಂಹನೊಂದಿಗೆ 'ಸಿಂಗನ ಗರುಡ' ಎಂಬ ಬಿರುದನ್ನು ಪಡೆದ ಎರಗನು ಉತ್ತಮ ಆಡಳಿತಗಾರನೂ ಹೌದು. ರಾಜ್ಯವನ್ನು ರಕ್ಷಿಸಿದಷ್ಟೇ ಅಲ್ಲದೇ ಶೂರನೂ ಹಾಗೂ ದಕ್ಷ ಮಂತ್ರಿಯನ್ನೂ ಪಡೆದಿದ್ದನು.

---

೧೪. ಎಸ್.ಆಯ್.ಆಯ್. - ೨೦, ಕ್ರಿ.ಶ.೧೦೯೮, ಸವದತ್ತಿ.
೧೫. ಅದೇ.
೧೬. ಅದೇ.

''ಕುಂಡಿ ಪಟ್ಟಣದ ರಾಜ್ಯದೊಳು ರಾಜ್ಯಂಗೆಯ್ಯುತ್ತಮಿರ್ದು ಎರಗ ದೇವರಸರ ಶ್ರೀ ಮನ್ಮಹಾ ಪ್ರಧಾನಂ ಧನ್ನಾಕರ್ಗೆಕೊಂಡಿ ಮೂರು ಸಾಸಿರದ ಕುರಂಬೆಟ್ಟಗಂಪಣದ ಬಳಿಯ ಬಾಡ ಕಂಕನೂರ ಪ್ರಭುತ್ವಮಂ ಅಷ್ಟಭೋಗ ತೇಜ ಸಾಮ್ಯಾಸಹಿತಂ ದಾರಾಪೂರ್ವಕಂ'' ಅಂದರೆ ಎರಗ ದೇವರಸನು ಮಹಾಪ್ರಧಾನ ದಂಡನಾಯಕನಾದ ಮಾದಿರಾಜನಿಗೆ ಕುರಂಬೆಟ್ಟಕಂಪಣದ ಬಳಿಯ ಬಾಡಕಂಕನೂರ ಪ್ರಭುತ್ವವನ್ನು ವಹಿಸಿಕೊಟ್ಟದ್ದನ್ನು ಕ್ರಿ.ಶ. ೧೦೪೧ ರ ರಾಯಬಾಗ ಶಾಸನ ವಿವರಿಸುತ್ತದೆ.[೧೭] ಎರಗನು ಕೇವಲ ಪರಾಕ್ರಮಿ ಮೋಧನಲ್ಲದೇ ಸಾಹಿತ್ಯ ಲಲಿತಕಲೆಗಳ ಆರಾಧಕನೂ, ಸಂಗೀತ ಅಭಿರುಚಿಯುಳ್ಳವನೂ, ಕಲಾವಿದರ ಕವಿಗಳ ಆಶ್ರಯದಾತನೂ ಆಗಿದ್ದರಿಂದ 'ಸರಸ್ವತಿ ಕರ್ಣಕುಂಡಲ' ಎಂಬುದಾಗಿ ಗೌರವಿಸಲ್ಪಟ್ಟಿದ್ದನು.

**ಅಂಕ (ಸು. ಕ್ರಿ.ಶ. ೧೦೪೮):**

ಅಂಕನ ಕಾಲಕ್ಕೆ ರಟ್ಟರ ಪ್ರಾಬಲ್ಯ ಹೆಚ್ಚಿತು. ಮಧ್ಯ ಪರಾಕ್ರಮಮಿಯಾಗಿದ್ದ ಅಂಕನು ಅನೇಕ ಯುದ್ಧಗಳನ್ನು ಎದುರಿಸಿದನು. ದಕ್ಷಿಣದ ಚೋಳರು ದಂಡೆತ್ತಿ ಬಂದಾಗ ಅವರನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸಿ ಆ ರಾಜ್ಯವನ್ನು ರಕ್ಷಿಸಿದ ಕೀರ್ತಿ 'ಅಂಕ' ನಿಗೆ ಸಲ್ಲುತ್ತದೆ. ನಂತರ ಸುಗಂಧವರ್ತಿ ರಾಜಧಾನಿಯಾಗಿ ಅಸ್ತಿತ್ವಕ್ಕೆ ಬಂದದ್ದು ಈ ಕಾಲದಲ್ಲೇ. ವಿದ್ಯಾಪ್ರೇಮಿಯಾಗಿದ್ದ ಕೊಕಟನೂರ(ಈಗಿನ ಅಥಣಿ ತಾಲೂಕಿನ)ಲ್ಲಿ ವಿದ್ಯಾಕೇಂದ್ರ ಸ್ಥಾಪಿಸಿ ಉಪಾಧ್ಯಾಯರಿಗೆ, ವಿದ್ಯಾರ್ಥಿಗಳಿಗೆ ಭೂದಾನ ಮಾಡಿದ ವಿವರ ಶಾಸನದಲ್ಲಿದೆ.[೧೮]

**ಸೇನ (ಕಾಳಸೇನ):**

ಆರನೇ ವಿಕ್ರಮಾದಿತ್ಯನ ಸಾಮಂತ ಸೇನ ದಕ್ಷ ಆಡಳಿತಗಾರ. ಈತನ ರಾಣಿ ಮೈಳಲದೇವಿ. ಪ್ರಜೆಗಳು ಅತ್ಯಂತ ಗೌರವದಿಂದ ಕಾಣುತ್ತಿದ್ದರು. ಈತನು ಪರಾಕ್ರಮಿಯೂ ಹೌದು. ಈ ದಂಪತಿಗಳ ಮಗನೇ ಕಣ್ಣ.

**ಕಣ್ಣ (೨ನೇ ಕಣ್ಣಕೈರ) (ಸು. ಕ್ರಿ.ಶ. ೧೦೮೮):**

ಸೇನನ ನಂತರ ಕಣ್ಣ ಸಿಂಹಾಸನಕ್ಕೆ ಬಂದನು. ಸಹೋದರ ೩ನೇ ಕಾರ್ತವೀರ್ಯನು ಈತನಿಗೆ ಬೆಂಗಾವಲಾಗಿದ್ದನು. ಲಾಟರ ವಿರುದ್ಧ ದಂಡಯಾತ್ರೆ ಕೈಗೊಂಡು ಯಶಸ್ವಿಯಾಗಿದ್ದರಿಂದ ಈತನೊಂದಿಗೆ ವೈವಾಹಿಕ ಸಂಬಂಧ ನೆರವೇರಿಸಿ ತಮ್ಮ ರಾಜಕುಮಾರಿಯನ್ನು ದೊರೆಗೆ ವಿವಾಹ ಮಾಡಿಕೊಟ್ಟಿದ್ದರು.

---

೧೭. ಎಸ್.ಆಯ್.ಆಯ್. - ೨೦, ಕ್ರಿ.ಶ. ೧೦೪೧, ರಾಯಭಾಗ.

೧೮. ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಪು. ೧೪.

ದಕ್ಷನೂ, ಪರಾಕ್ರಮಿಯೂ, ಧರ್ಮಪುತ್ರನೂ ಆಗಿದ್ದನು. ಚಕ್ರವರ್ತಿ ೬ನೇ ವಿಕ್ರಮಾದಿತ್ಯನಿಗೆ ಈತ ಆಡಳಿತ ಸಲಹೆಗಾರನಾಗಿದ್ದನು. ಕಣ್ಣನಿಗೆ 'ಕನಕಪ್ರಭಾಸಿದ್ಧಾಂತದೇವ'ನೆಂಬ ಗುರುವಿದ್ದು ಆತನು ವೇದಶಾಸ್ತ್ರಗಳಲ್ಲಿ ಪಾರಂಗತನಾಗಿದ್ದನು. ಅವನ ಶಿಷ್ಯ ಕಣ್ಣಖೈರನು ವೇದಾಂತ ಧರ್ಮದಲ್ಲಿ ಆಸಕ್ತಿ ಹೊಂದಿದ್ದನೆಂಬುದಕ್ಕೆ 'ಕಣ್ಣಕೈರ ವೃಪಃಖ್ಯಾತೋ ನೃತ್ಯಗೀತಾದಿ ಕೋವಿದಃ'[೧೯] ಬಹುಮುಖ ಪ್ರತಿಭೆಯುಳ್ಳ ಈತ ಸಾಕಷ್ಟು ಜನಪ್ರೀಯತೆ ಗಳಿಸಿದ್ದನು.

## ೨ನೇ ಕಾರ್ತವೀರ್ಯ (ಕ್ರಿ.ಶ. ೧೦೮೦ ರಿಂದ ೧೧೯೬):

ಕಣ್ಣಕೈರನ ನಂತರ ಅವನ ಸಹೋದರ ಕಾರ್ತವೀರ್ಯ ಅಧಿಕಾರಕ್ಕೆ ಬಂದನು. ಈತನಿಗೆ 'ಯುದ್ಧಭಯಂಕರ'ನೆಂಬ ಬಿರುದು ಇತ್ತು. ಕಾಮದೇನುವಿನಂತೆ ಸುಂದರನಾಗಿದ್ದ ಈತನ ವರ್ಣನೆ ಶಾಸನದಲ್ಲಿದೆ.[೨೦] ''ಲತ್ತಲೂರ್ಪುರವರಾಧೀಶ್ವರಂ ತ್ರಿವಳಿತೂರ್ಯ್ಯ ನಿಗೋಷಣಂ ರಟ್ಟಕುಳಭೂಪ ಸಿಂಧೂರ ಲಾಂಛನಂ ವಿವೇಕ ವಿರಂಚನಂ ಸುವರ್ಣ ಗರುಡ ಧ್ವಜಂ ಸಹಜ ಮಕರದ್ವಜ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಣ್ಡಳೇಶ್ವರ ಕಾರ್ತವೀರ್ಯ ನೃಪಃ''. ಈತನ ರಾಣಿ ಬಾಗಲಾದೇವಿ. ದಾನ ಧರ್ಮಕ್ಕೆ ಹೆಸರಾಗಿದ್ದಳು. ಪ್ರಜೆಗಳಿಂದ ವಿಶ್ವಮಾತೆಯೆನಿಸಿದ್ದಳು. ಮತ್ತೊಬ್ಬ ರಾಣಿ ಮೈಳಲದೇವಿ ಪಾರ್ವತಿಯಂತಿದ್ದ ಇವಳನ್ನು 'ಗಿರಿಸುತೆ' ಎಂದು ಸಂಬೋಧಿಸುತ್ತಿದ್ದರು. ಇವರ ಮಗಮನೇ ೨ನೇ ಸೇನ.

## ೨ನೇ ಸೇನ (ಕಾಲಸೇನ) (ಕ್ರಿ.ಶ. ೧೧೯೬):

ಈವರೆಗಿನ ರಟ್ಟ ಸಂತತಿಯಲ್ಲಿ ಪ್ರಮುಖ ದೊರೆ ಎಂದರೆ ೨ನೇ ಸೇನ. ಕುಹೂಂಡಿ ಮೂಸಾಸಿರ ನಾಡಿಗೆ ಅಧಿಪತಿ ೩೫ ವರ್ಷಗಳ ದೀರ್ಘ ಆಳ್ವಿಕೆ ರಟ್ಟ ಇತಿಹಾಸದಲ್ಲಿ ಅವಿಸ್ಮರಣೀಯ ಘಟನೆ. ಪ್ರಜೆಗಳು ಹೆಮ್ಮೆಯಿಂದ 'ಪೃಥ್ವಿವಲ್ಲಭ'ನೆಂದು ಹೊಗಳಿದ್ದಾರೆ. ಶತ್ರುಗಳ ಶಿರ ಚಂಡಾಡುವುದರಲ್ಲಿ ಈತ ನಿಪುಣ. ದುಷ್ಟ ಶಿಕ್ಷಕ ಶಿಷ್ಟ ರಕ್ಷಕನಾಗಿ ದಕ್ಷತೆಯಿಂದ ರಾಜ್ಯಭಾರ ಮಾಡಿ ಜನಮೆಚ್ಚುಗೆ ಪಡೆದಿದ್ದನು. ರಾಜ್ಯ ಸಂಪತ್ತಿನ ಒಂದು ಭಾಗವನ್ನು ದೊರೆಯು ಕಲಾಭಿವೃದ್ಧಿಗಾಗಿ ವಿನಿಯೋಗಿಸುವುದರ ಜೊತೆಗೆ ವಿದ್ವಾಂಸರಿಗೆ ಉದಾರ ಪ್ರೋತ್ಸಾಹ ನೀಡಿದ್ದನು. ಸ್ವತಃ ವಿದ್ವಾಂಸನಾಗಿದ್ದು ವಿದ್ಯಾಭಿಮಾನಿಯೂ, ವಿದ್ವಾಂಸರ ಸಭೆಯಲ್ಲಿ ಸೂರ್ಯನಂತೆ ಶೋಭಿಸುತ್ತಿದ್ದನೆಂದು ಶಾಸನ ಉಲ್ಲೇಖಿಸುತ್ತದೆ.[೨೧] ಈತನ ಪಟ್ಟಮಹಿಷಿ ಲಖಿವಾದೇವಿ

---

೧೯. ಎಸ್.ಆಯ್.ಆಯ್. - ೨೦, ೭೬, ಕ್ರಿ.ಶ. ೧೧೯೮.

೨೦. ಎಸ್.ಆಯ್.ಆಯ್. - ೨೦, ೬೧, ಕ್ರಿ.ಶ. ೧೦೮೪, ಸೌಂದತ್ತಿ.

೨೧. ಎಸ್.ಆಯ್.ಆಯ್. - ೨೦, ಕ್ರಿ.ಶ. ೧೧೪೧, ನೇಸರಗಿ.

ಮಹಾದಾನಿಯಾಗಿದ್ದಳು. ಹಲವಾರು ದೇವಾಲಯಗಳನ್ನು ಹಾಗೂ ಬಸದಿಗಳನ್ನು ಕಟ್ಟಿಸಿದ ಹಾಗೂ ಜೀರ್ಣೋದ್ಧಾರ ಮಾಡಿದ ವಿವರಗಳನ್ನು ಶಾಸನ ತಿಳಿಸುತ್ತದೆ.[೨೨]

**೩ನೇ ಕಾರ್ತವೀರ್ಯ (ಕ್ರಿ.ಶ. ೧೧೩೦-೧೧೫೩):**

ಸೇನನ ನಂತರ ಅಧಿಕಾರಕ್ಕೆ ಬಂದ ೩ನೇ ಕಾರ್ತವೀರ್ಯನ ಆಳ್ವಿಕೆಯಲ್ಲಿ ರಟ್ಟರ ಕೀರ್ತಿ ಉತ್ತುಂಗಕ್ಕೇರಿತು. ತಾನು ಸ್ವತಂತ್ರನಾಗಲು ಬಯಸಿದ ಕಾರ್ತವೀರ್ಯ ನೇಸರಗಿಯಲ್ಲೊಂದು ರಾಜಧಾನಿ ಸ್ಥಾಪಿಸಿದನು. ನಂತರ ಕ್ರಿ.ಶ. ೧೧೮೪ ರ ವೇಳೆಗೆ ಹೊಯ್ಸಳ ಹಾಗೂ ಯಾದವರ ಪ್ರಾಬಲ್ಯ ಕುಂಠಿತಗೊಂಡ ನಂತರ ಸಂಪೂರ್ಣ ಸ್ವತಂತ್ರಗೊಂಡು ಸವದತ್ತಿಯಿಂದ ಬೆಳಗಾವಿಗೆ ರಾಜಧಾನಿ ಸ್ಥಳಾಂತರಗೊಂಡಿತು.[೨೩] ಈತ ಸರ್ವಧರ್ಮಕ್ಕೆ ಪ್ರೋತ್ಸಾಹ ನೀಡಿದ್ದನು. ಅನೇಕ ದೇವಾಲಯಗಳನ್ನು ನಿರ್ಮಿಸಿದ್ದನು. ಈತನ ಪತ್ನಿ ಪದ್ಮಲಾದೇವಿ ರೂಪವತಿಯೂ, ಕಲಾಕೌಶಲ್ಯವುಳ್ಳವಳೂ ಹೌದು. ಈಕೆ ಜೈನ ಧರ್ಮಕ್ಕೆ ಪ್ರೋತ್ಸಾಹ ನೀಡಿದ್ದಳು. ಈ ಅರಸನ ಆಜ್ಞೆಯ ಮೇರೆಗೆ ಮಾಂಡಳಿಕ ಗೊಂಕರಸನು ತೇರದಾಳದಲ್ಲಿ ಜಿನಾಲಯ ಕಟ್ಟಿಸಿ ಅದಕ್ಕೆ ಗೊಂಕ ಜಿನೇಲಯವೆಂದು ಹೆಸರಿಸಿ ಅಲ್ಲಿಗೆ ಮಾಘನಂದಿ ಸೈದ್ಧಾಂತಿಕರನ್ನು ಕರೆಸಿ ಶ್ರೀನೇಮಿನಾಥನನ್ನು ಪ್ರತಿಷ್ಠೆ ಮಾಡಿಸಿದ್ದನ್ನು ರಾಯಭಾಗ ಶಾಸನ ವಿವರಿಸುತ್ತದೆ.[೨೪]

**ಲಕ್ಷ್ಮೀದೇವ (ಕ್ರಿ.ಶ. ೧೧೭೦ - ೧೧೯೦):**

ಸುಮಾರು ೨೦ ವರ್ಷ ಆಳಿದ ಲಕ್ಷ್ಮೀದೇವ ಅತ್ಯಂತ ಸಮರ್ಥ ದೊರೆ. ಗೋವೆ ಕದಂಬರಿಂದ ವೇಣುಗ್ರಾಮವನ್ನು ಗೆದ್ದು ತನ್ನ ರಾಜ್ಯದ ರಾಜಧಾನಿಯನ್ನಾಗಿ ಮಾಡಿಕೊಂಡನು. ಪ್ರಜೆಗಳಿಂದ ಈತ ಮನ್ಮಥ, ಚಂದ್ರ ಎಂಬುದಾಗಿ ಕರೆಸಿಕೊಂಡಿದ್ದನು. 'ರಟ್ಟರ ಕುಲಾಗ್ರಣಿ' ಎಂದು ಶಾಸನದಲ್ಲಿ ಹೊಗಳಲಾಗಿದೆ. ಬಲಚಕ್ರವರ್ತಿ ಎಂಬ ಬ್ರಾಹ್ಮಣರಿಗೆ ದಾನ ನೀಡಿದ್ದನು. ಈತನ ರಾಣಿ ಚಂದ್ರಿಕಾದೇವಿ. ಇವರ ಗುಣ ವಿಶೇಷಗಳನ್ನು ನೇಮಿಚಂದ್ರನೆಂಬ ಪ್ರಸಿದ್ಧ ಜೈನಕವಿ ಮುಕ್ತವಾಗಿ ಹೊಗಳಿದ್ದಾನೆ.[೨೫]

**೪ನೇ ಕಾರ್ತವೀರ್ಯ (ಕ್ರಿ.ಶ. ೧೧೯೯):**

ಅಲ್ಪ ಕಾಲದಲ್ಲಿ ಮಹತ್ವದ ಸಾಧನೆ ೪ನೇ ಕಾರ್ತವೀರ್ಯನ ಕಾಲಕ್ಕೆ ನಡೆಯಿತು. ರಾಜ್ಯ ವಿಸ್ತರಣೆ ಹಾಗೂ ಸಂಸ್ಕೃತಿಯ ಬೆಳವಣಿಗೆ ಏಕಕಾಲದಲ್ಲಿ ನಡೆದವು. ರಾಜ್ಯದೆಲ್ಲೆಡೆ ಸುಖಶಾಂತಿ ನೆಲೆಸಿತ್ತು. ಈತನಿಗೆ

---

೨೨. ಎಸ್.ಆಯ್.ಆಯ್. - ೨೦, ಹೊಸೂರ.

೨೩. ಎಸ್.ಆಯ್.ಆಯ್. - ೨೦, ನೇಸರಗಿ.

೨೪. ಎಸ್.ಆಯ್.ಆಯ್. - ೨೦, ಕ್ರಿ.ಶ. ೧೧೨೩, ರಾಯಭಾಗ.

೨೫. ರಟ್ಟರ ಸಾಂಸ್ಕೃತಿಕ ಅಧ್ಯಯನ, ಪು. ೧೮.

ಇಬ್ಬರು ರಾಣಿಯರಿದ್ದು ದಾನಧರ್ಮ ಪರಾಯಣರಾಗಿದ್ದರು. ಚತುರ್ಭಾಷಾ ಕವಿ ಬಾಳಚಂದ್ರನು ರಚಿಸಿದ ಬೆಳಗಾವಿ ಶಾಸನದಲ್ಲಿ ಇವರ ಸಾಧನೆಯನ್ನು ವರ್ಣಿಸಿದ್ದಾನೆ. ಈ ಕಾಲದಲ್ಲಿ ನಿರ್ಮಾಣಗೊಂಡ ಶಾಂತಿನಾಥ ಜಿನಾಲಯಕ್ಕೆ ಕೆಲಭೂಮಿ ಹಾಗೂ ಗ್ರಾಮಗಳನ್ನು ದತ್ತಿಯಾಗಿ ನೀಡಿದ್ದನು. ಅದೇ ಶಾಸನ ವಿವರಿಸುತ್ತದೆ.[೨೬] ಈ ದೊರೆಯ ಸಾಧನೆ ಕಲ್ಲೊಳ್ಳಿ ಶಾಸನದಲ್ಲಿಯೂ ಮುಂದುವರೆದಿದೆ. ಈ ಶಾಸನದ ರಚನೆಕಾರ ಪಾರ್ಶ್ವಪಂಡಿತ. ಈತ ಜನ್ನನ ಸಮಕಾಲೀನಾಗಿದ್ದು ಪಾರ್ಶ್ವನಾಥ ಪುರಾಣವನ್ನು ಚಂಪೂಕಾವ್ಯದಲ್ಲಿ ರಚಿಸಿದ್ದಾನೆ. ೨ನೇ ಗುಣವರ್ಮನು ಪುಷ್ಪದಂತಪುರಾಣವನ್ನು ಚಂದ್ರನಾಥಾಷ್ಟಕವನ್ನೂ ರಚಿಸಿದ್ದಾನೆ. ಇದರಿಂದಾಗಿ ಕಲೆ ಮತ್ತು ಸಾಹಿತ್ಯ ಈ ಕಾಲದಲ್ಲಿ ಅಭಿವೃದ್ಧಿ ಹೊಂದಿತು.

### ೨ನೇ ಲಕ್ಷ್ಮೀದೇವ (ಕ್ರಿ.ಶ. ೧೨೨೮):

ರಟ್ಟವಂಶದ ಕೊನೆಯ ಪ್ರಭಲ ದೊರೆ ಎಂದರೆ ೨ನೇ ಲಕ್ಷ್ಮೀದೇವ. ಈತನಿಗೆ 'ಬೊಪ್ಪನ ಸಿಂಗ' ಎಂಬ ಬಿರುದು ಇತ್ತು. ಈತನಿಗೆ ಮುನಿಚಂದ್ರನೆಂಬವರು ಶಸ್ತ್ರ, ಶಾಸ್ತ್ರ ಶಿಕ್ಷಾಗುರು ಮತ್ತು ಸಚಿವನಾಗಿ ದೊರೆತಿದ್ದನು. ಆಸ್ಥಾನದಲ್ಲಿ ಶಾಂತಿನಾಥ ಮತ್ತು ಮಲ್ಲಿಕಾರ್ಜುನರೆಂಬ ಅಮಾತ್ಯರಿದ್ದರು. ಮುನಿಚಂದ್ರನು ರಾಜತಂತ್ರನಿಪುಣನೂ, ಕವಿಯೂ ಆಗಿದ್ದನು. ಲಕ್ಷ್ಮೀದೇವನು ಮೊದಲ ರಾಜಧಾನಿ ಸುಗಂಧವರ್ತಿಯ ಹೊರವಲಯದಲ್ಲಿ ನಾಗರಕೆರೆಯ ಬಳಿ ತನ್ನ ತಂದೆಯ ಸ್ಮರಣಾರ್ಥ ಮಲ್ಲಿನಾಥ ದೇವಾಲಯವನ್ನು ಕಟ್ಟಿಸಿದನು. ಶ್ರೀಶೈಲ ಪರ್ವತಕ್ಕೆ ಬೇಟಿ ನೀಡಿ ಅಲ್ಲಿನ ಶಿಲಾರಚಿತ ಲಿಂಗವನ್ನು ತಂದು ಈ ದೇವಾಲಯದಲ್ಲಿ ಪ್ರತಿಷ್ಠಾಪಿಸಿದನು.[೨೭] ಇವನ ಆಳ್ವಿಕೆಯ ನಂತರ ರಟ್ಟರ ಅವನತಿ ಪ್ರಾರಂಭವಾಗಿ ಸಾಮಂತರಾಗಿ ಮುಂದುವರೆದರು.

### ಕಲ್ಯಾಣಿ ಚಾಲುಕ್ಯರು (ಕ್ರಿ.ಶ. ೯೭೩ ರಿಂದ ೧೧೯೮):

ರಾಷ್ಟ್ರಕೂಟರ ಸು. ೩೦೦ ವರ್ಷಗಳ ಆಳ್ವಿಕೆಯ ನಂತರ ದಕ್ಷಿಣ ತಪ್ಪಲಿನಲ್ಲಿ ಚಾಲುಕ್ಯರ ಆಳ್ವಿಕೆ ಮತ್ತೆ ಸ್ಥಾಪಿತವಾಯಿತು. ಈ ಕಾರ್ಯವನ್ನು ಸಾಧಿಸಿದವರು ಚಾಲುಕ್ಯರ ಮನೆತನಕ್ಕೆ ಸೇರಿದ ೨ನೇ ತೈಲಪ (ಕ್ರಿ.ಶ. ೯೭೩ ರಿಂದ ೯೭೭) ಮುಂದೆ ಬೀದರ ಜಿಲ್ಲೆಯ ಕಲ್ಯಾಣವು ಇವರ ರಾಜಧಾನಿಯಾದುದರಿಂದ ಇವರಿಗೆ ಕಲ್ಯಾಣಿ ಚಾಲುಕ್ಯರು ಎಂಬ ಹೆಸರು ಬಂದಿತು. ಈ ಸಾಮ್ರಾಜ್ಯ ಸ್ಥಾಪನೆಗೆ ಕಾರಣವಾದ ೨ನೇ ತೈಲಪ ಕ್ರಿ.ಶ. ೯೫೦ ರಲ್ಲಿ ರಾಷ್ಟ್ರಕೂಟರ ೩ನೇ ಕೃಷ್ಣನ ಆಳ್ವಿಕೆಯಲ್ಲಿ ಆಡಳಿತಾಧಿಕಾರಿಯಾಗಿದ್ದನು. ಮಹತ್ವಾಕಾಂಕ್ಷೆಯಾದ

---

೨೬. ಎಸ್.ಆಯ್.ಆಯ್. - ೨೦, ಬೆಳಗಾವಿ.
೨೭. ಎಸ್.ಆಯ್.ಆಯ್. - ೨೦, ಸೌಂದತ್ತಿ.

ಇವನು ತನ್ನ ಮನೆತನದ ಗತವೈಭವವನ್ನು ಮತ್ತೇ ಬೆಳಗಿಸಲು ಹವಣಿಸುತ್ತಿದ್ದರು. ವಿಪುಲ ಸಂಖ್ಯೆಯಲ್ಲಿ ಲಭ್ಯವಿರುವ ಇವರ ಕಾಲದ ಶಾಸನಗಳು ಮತ್ತು ಸಾಹಿತ್ಯದ ಮೂಲಗಳು ಕಲ್ಯಾಣದ ಚಾಲುಕ್ಯರ ಚರಿತ್ರೆಯ ನಿರೂಪಣೆಗೆ ಆಧಾರಗಳಿವೆ. ಈ ಕಾಲದಲ್ಲಿ ಸೃಷ್ಠಿಗೊಂಡ ವಚನಸಾಹಿತ್ಯವು ಅಂದಿನ ಸಮಕಾಲೀನ ಸಾಮಾಜಿಕ ಮತ್ತು ಧಾರ್ಮಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ.

ತೈಲಪನು ರಾಜ್ಯ ಸ್ಥಾಪಿಸುವ ವೇಳೆಗೆ ದಕ್ಷಿಣ ಭಾರತದ ರಾಜಕೀಯ ಪರಿಸ್ಥಿತಿಯಲ್ಲಿ ಅನೇಕ ಬದಲಾವಣೆಗಳು ನಡೆದಿದ್ದವು. ಒಂದು ಕಡೆ ಗಂಗದೊರೆ೩ನೇ ಮಾರಸಿಂಗ ಮತ್ತೊಂದು ಕಡೆ ಚೋಳರಾಜ ಗಂಗವಾಡಿಯನ್ನು ಆಕ್ರಮಿಸಿದರು. ಉತ್ತರದಲ್ಲಿ ಪರಮಾರದೊರೆ ಮುಂಜ ರಾಜ್ಯ ವಿಸ್ತರಣೆಯಲ್ಲಿ ತೊಡಗಿದರು. ಇಂಥ ಪರಿಸ್ಥಿತಿಯಲ್ಲಿ ತೈಲಪ ರಾಜ್ಯವನ್ನು ಸ್ಥಿರಗೊಳಿಸಲು ಹಲವು ವರ್ಷ ಶ್ರಮಿಸಬೇಕಾಯಿತು. ಮುಂದೆ೧ನೇ ಸೋಮೇಶ್ವರ(ಕ್ರಿ.ಶ. ೧೦೪೪ ರಿಂದ೧೦೬೨)ನ ಕಾಲಕ್ಕೆ ಚೋಳರು ಪ್ರಬಲಗೊಂಡು ನಿರಂತರ ಯುದ್ಧದಲ್ಲಿ ತೊಡಗಬೇಕಾಯಿತು. ರಾಜಾಧಿತ್ಯರಾಜಚೋಳನ ಸೈನ್ಯವು ಕೋಲ್ಲಾಪುರದವರೆಗೂ ಸಾಗಿತು. ಈತನ ಆಳ್ವಿಕೆ ದೀರ್ಘ ಹೋರಾಟದಲ್ಲಿ ಕಳೆದರೂ ಸಾಹಿತ್ಯ ಶಿಲ್ಪಕಲೆಗಳಿಗೆ ಆವ್ಯಾಹತವಾಗಿ ಪ್ರೋತ್ಸಾಹ ದೊರೆತು ಅವು ಊರ್ಜಿತಗೊಂಡವು. ಕಲ್ಯಾಣವು ಚಾಲುಕ್ಯರ ರಾಜಧಾನಿಯಾಗಿ ಅಸ್ಥಿತ್ವಕ್ಕೆ ಬಂದಿತು.

೬ನೇ ವಿಕ್ರಮಾದಿತ್ಯನ ೫೦ ವರ್ಷಗಳ ದೀರ್ಘ ಆಳ್ವಿಕೆಯ ಕಾಲ ಕರ್ನಾಟಕದ ಇತಿಹಾಸದಲ್ಲಿ ಶಾಂತಿ-ಸಮೃದ್ಧಿಯ ಹಾಗೂ ಕಲೆ ಸಾಹಿತ್ಯಗಳ ಅಭಿವೃದ್ಧಿಯ ಕಾಲ. ಇವನ ಆಳ್ವಿಕೆಯ ಒಂದು ಗಮನಾರ್ಹ ಅಂಶವಂದರೆ ರಾಜ್ಯದ ಮೇಲೆ ಗಂಭೀರ ಸ್ವರೂಪದ ದಾಳಿಗಳು ನಡೆಯದಿದ್ದುದು ಇವನ ವಿಜಯ ಯಾತ್ರೆಗಳೇ ಕಡಿಮೆ ದಕ್ಷಿಣದಲ್ಲಿಯಂತೂ ಒಂದು ರೀತಿಯಲ್ಲಿ ಬಲಾಬಲ ಪರೀಕ್ಷೆಯ ನಡೆದು ಹೋಗಿದ್ದು ಆ ಗಡಿಯು ಸ್ತಂಭವಾಗಿದ್ದಿತು.

ವಿಕ್ರಮಾದಿತ್ಯ(ಕ್ರಿ.ಶ. ೧೦೭೬-೧೧೨೭)ನ ಅಂತ್ಯದ ಕಾಲಕ್ಕೆ ದಕ್ಷಿಣ ಭಾಗದಲ್ಲಿ ಹೊಯ್ಸಳರು ತಲೆಯೆತ್ತುತ್ತಿದ್ದರು. ಮೊದಲು ಚಾಲುಕ್ಯ ಅರಸರಿಗೆ ವಿಧೇಯರಾಗಿದ್ದ ಇವರು ಬರಬರುತ್ತ ಅವರನ್ನು ಧಿಕ್ಕರಿಸತೊಡಗಿದ್ದರಿಂದ ಚಾಲುಕ್ಯ ಮತ್ತು ಹೊಯ್ಸಳರಿಗೆ ಹೋರಾಟಗಳು ನಡೆದವು. ವಿಕ್ರಮಾದಿತ್ಯ ಕೈಗೊಂಡ ಧಾರ್ಮಿಕ ಕಾರ್ಯಗಳಿಗೆ ಕೊನೆಯೇ ಇರಲಿಲ್ಲ. ಕನ್ನಡ ನಾಡಿನಲ್ಲಿ ದೊರೆತ ಅಧಿಕ ಶಾಸನಗಳೆಂದರೆ ಇವನವೇ ಆಗಿವೆ. ತನ್ನ ಆಳ್ವಿಕೆಯ ಕಾಲದಿಂದ ವಿಕ್ರಮಶಕೆ ಸಂವತ್ಸರವನ್ನು ಆರಂಭಿಸಿದ ಈತನ ಆಳ್ವಿಕೆ ಕರ್ನಾಟಕದ ಇತಿಹಾಸದಲ್ಲಿ ಸುವರ್ಣಯುಗ.

**ಕಲಚೂರಿಗಳು (ಕ್ರಿ.ಶ. ೧೧೫೬- ೧೧೮೪) :**

ಚಾಲುಕ್ಯರ ನಂತರ ಕಲಚೂರಿಗಳು ತಲೆಎತ್ತಿದರು. ೨ನೇ ಬಿಜ್ಜಳ ಇವರ ಅಪ್ರತಿಮ ದೊರೆ. ಇವರು ಚಾಲುಕ್ಯರ ಮಾಂಡ್ಲಲಿಕರಾಗಿದ್ದರು. ಇವರು ಸ್ವತಂತ್ರ ಆಳ್ವಿಕೆ ನಡೆಸಿದ್ದು ಕೇವಲ ೩ ದಶಕಗಳು ಮಾತ್ರ. ಇವರ ಆಳ್ವಿಕೆಯಲ್ಲಿ ಕರ್ನಾಟಕದ ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಕ್ರಾಂತಿಕಾರಿ ಬದಲಾವಣೆಗಳಾದವು. ೨ನೇ ಬಿಜ್ಜಳನ ಆಸ್ಥಾನದಲ್ಲಿ ಮಹಾಮಂತ್ರಿಯಾಗಿದ್ದು ಬಸವಣ್ಣನವರು ಸಮಾಜ ಸುಧಾರಣೆಯ ಕಾರ್ಯವನ್ನು ಕೈಗೊಂಡು ವೈಚಾರಿಕ ಕ್ರಾಂತಿಯನ್ನೆಸಗಿದರು. ಸಾಮಾಜಿಕ ಜೀವನವನ್ನು ಅನಿಷ್ಠ ಸಂಪ್ರದಾಯಗಳ ಕಪಿಮುಷ್ಠಿಯಿಂದ ಮುಕ್ತಗೊಳಿಸಲು ಸರಳವಾದ ಭಾಷೆಯಲ್ಲಿ ವಚನಗಳನ್ನು ರಚಿಸಿ ಧರ್ಮ ಹಾಗೂ ತತ್ವಬೋಧನೆಯ ಕಾರ್ಯವನ್ನು ಆರಂಭಿಸಿದರು.

ಬಿಜ್ಜಳನು ಸ್ವತಂತ್ರ ಅರಸನಾದರೂ ಅವನು ಅನುಭೋಗಿಸುವ ಸ್ಥಿತಿಯಲ್ಲಿ ಇರಲಿಲ್ಲ. ತಾನು ಅನುಸರಿಸಿದ ವಾಮಮಾರ್ಗಗಳು ಅವನಿಗೆ ತಿರುಗಬಾಣವಾಗಿದ್ದವು. ಬಸವೇಶ್ವರರನ್ನು ವಿರೋಧಿಸಿದ್ದರಿಂದ ತನ್ನ ಪ್ರಾಣವನ್ನು ಕಳೆದುಕೊಳ್ಳಬೇಕಾಯಿತು.

**ದೇವಗಿರಿ ಯಾದವರು (ಕ್ರಿ.ಶ. ೧೦೦೦ ರಿಂದ ೧೩೧೮) :**

ಸೇವುಣರು ಅಥವಾ ಯಾದವರು ಕ್ರಿ.ಶ. ೧೨ನೇ ಶತಮಾನದ ಕೊನೆಗೆ ಮಾತ್ರ ಸ್ವತಂತ್ರ ಸ್ಥಾಪಿಸಿದರೂ ಮೊದಲಿನಿಂದಲೂ ತಮ್ಮ ಪ್ರಭಾವವನ್ನು ಬೀರಿದರು. ಸೇವುಣರನ್ನು 'ಯಾದವರು' ಎಂದು ಸಾಮಾನ್ಯವಾಗಿ ಕರೆಯುತ್ತಾರೆ. ಅವರು ಸ್ವತಂತ್ರ ಅರಸರಾದಾಗ ಮಾತ್ರ ದೇವಗಿರಿಯು ಅವರ ರಾಜಧಾನಿಯಾಯಿತು. ರಾಷ್ಟ್ರಕೂಟರ ಉತ್ತರಾರ್ಧಕಾಲ ಮಾಂಡಲಿಕತ್ವ ಪಡೆದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮಹಾಮಂಡಳೇಶ್ವರರಾಗಿ ಅನಂತರ ಮಹಾರಾಷ್ಟ್ರ ಹಾಗೂ ಕನ್ನಡ ನಾಡಿನ ಉತ್ತರ ಭಾಗದಲ್ಲಿ ಪರಮಾಧಿಕಾರ ಸ್ಥಾಪಿಸಿ ಆಳಿದ ಸೇವುಣ ಸಂತತಿಯನ್ನು ದೇವಗಿರಿ ಯಾದವರೆಂದು ಕರೆಯಲಾಗಿದೆ. ಈ ವಂಶದಲ್ಲಿ ೫ನೇ ಭಿಲ್ಲಮ (ಕ್ರಿ.ಶ. ೧೧೭೩ ರಿಂದ ೧೧೯೨) ಪ್ರಸಿದ್ಧ ದೊರೆ ಅಧಿಕಾರಕ್ಕೆ ಬಂದ ನಂತರ ಬಿಲ್ಲಮನು ಸ್ವತಂತ್ರ ಹೋರಾಟವನ್ನು ತೀವ್ರಗೊಳಿಸಿದ ಪರಿಸ್ಥಿತಿ. ಅವನಿಗೆ ಅನುಕೂಲಕರವಾಗಿತ್ತು. ಸೇವುಣರ ಚರಿತ್ರೆಯಲ್ಲಿ ಭಿಲ್ಲಮನ ಆಳ್ವಿಕೆ ಬಂದು ಮಹತ್ವದ ಘಟ್ಟ. ಇತರರ ಆಳ್ವಿಕೆಯಲ್ಲಿ ಕೇವಲ ಮಾಂಡಲಿಕ ಸ್ಥಾನವನ್ನು ಪಡೆದಿದ್ದು ಸೇವುಣ ಮನೆತನ ಭಿಲ್ಲಮನಿಂದಾಗಿ ಸ್ವತಂತ್ರ ರಾಜವಂಶದ ಸ್ಥಾನಕ್ಕೆ ಏರಿತು. ನಂತರ ಚಾಲುಕ್ಯ ಸಾಮ್ರಾಜ್ಯದ ಬಹುಭಾಗವು ಇವನ ವಶವಾದಾಗ ನರ್ಮದೆಯಿಂದ

ಮಲಪ್ರಭೆವರೆಗಿನ ವಿಸ್ತಾರವಾದ ಪ್ರದೇಶ ಇವನ ಅಧಿಪತ್ಯಕ್ಕೆ ಒಳಗಾಯಿತು. ಆಗ ಮಧ್ಯವರ್ತಿಯಾದ ದೇವಗಿರಿ ಅಥವಾ ಇಂದಿನ ದೌಲತಾಬಾದವನ್ನು ಆಯ್ದುಕೊಂಡು ಅಲ್ಲಿ ರಾಜಧಾನಿ ಕಟ್ಟಿಸಿದನು. ಆದರೆ ಅದು ಪೂರ್ಣಗೊಳ್ಳಲಿಲ್ಲ.

ಸೇವುಣರ ಚರಿತ್ರೆಯಲ್ಲಿ ೨ನೇ ಸಿಂಘಣ (ಕ್ರಿ.ಶ. ೧೧೯೯ ರಿಂದ ೧೨೪೭)ಆಳ್ವಿಕೆಯು ಒಂದು ಮಹತ್ವದ ಅಧ್ಯಾಯ. ಇವನ ಸುಧೀರ್ಘ ಆಳ್ವಿಕೆಯಲ್ಲಿ ಸೇವುಣ ವಂಶದ ಹಿರಿಮೆಯ ಪರಾಕಾಷ್ಠೆಯನ್ನು ಮುಟ್ಟಿತು. ಅನೇಕ ಸಾಮಂತರು ಇವನ ಸಾರ್ವಭೌಮತ್ವವನ್ನು ಅಂಗೀಕರಿಸಿದರು. ಇವನ ನಂತರ ರಾಮಚಂದ್ರ (ಕ್ರಿ.ಶ. ೧೨೭೧-೧೩೧೨) ನ ಕಾಲಕ್ಕೆ ಅಲ್ಲಾವುದ್ದೀನ್ ಖಿಲ್ಜಿಯ ದಾಳಿಗೆ ಸಿಲುಕಿತು.

**ಹೊಯ್ಸಳರು (ಕ್ರಿ.ಶ.೧೦೦೬ ರಿಂದ ೧೩೪೩) :**

೧೨ನೇ ಶತಮಾನದ ಕೊನೆ ಭಾಗದಲ್ಲಿ ಕಲ್ಯಾಣದ ಚಾಲುಕ್ಯರ ಪ್ರಭಾವ ಇಳಿಮುಖವಾಗತೊಡಗಿದಾಗ ಸೇವುಣರಂತೆ ಹೊಯ್ಸಳರೂ ಸಹ ಚಾಲುಕ್ಯರ ಸಾಮ್ರಾಜ್ಯದ ಅಧಿಪತ್ಯಕ್ಕಾಗಿ ಪ್ರಯತ್ನಿಸಿ ಕೊನೆಗೆ ಅದು ಇಬ್ಬಾಗವಾಗಿ ಹೊಯ್ಸಳರು ತುಂಗಭದ್ರೆಯ ದಕ್ಷಿಣ ಭಾಗದಲ್ಲಿ ಸ್ವತಂತ್ರವಾಗಿ ಆಳತೊಡಗಿದರು. ಆದರೆ ಇವರು ಇದಕ್ಕೂ ಮೊದಲೇ ಅಧಿಕಾರದಲ್ಲಿದ್ದರು. ಗಂಗರ ಅಳಿವಿನ ನಂತರ ಚೋಳರ ಅಧೀನವಾಗಿದ್ದ ಪ್ರದೇಶವನ್ನು ವಿಸ್ತರಿಸಿ ರಾಜ್ಯ ಸ್ಥಾಪಿಸಿದರು.

ಹೊಯ್ಸಳರ ಚರಿತ್ರೆಯು ಹಲವು ದೃಷ್ಟಿಗಳಿಂದ ವೈಶಿಷ್ಟ್ಯಪೂರ್ಣವಾಗಿದೆ. ಅಪ್ಪಟ ಕನ್ನಡಿಗರೆಂಬ ಅಭಿಮಾನವನ್ನು ಬಲವಾಗಿ ಸ್ಥಾಪಿಸಿದರು. ಮುಸ್ಲಿಂ ಆಕ್ರಮಣಕಾರರು ೧೧ನೇ ಶತಮಾನದ ನಂತರದಲ್ಲಿ ದಕ್ಷಿಣ ಭಾರತದ ಮೇಲೆ ದುರುದ್ದೇಶದಿಂದ ಆಕ್ರಮಣ ನಡೆಸಿದರು. ಅವರನ್ನು ಸಮರ್ಥವಾಗಿ ತಡೆಗಟ್ಟಿ ಕರ್ನಾಟಕದ ಅಸ್ತಿತ್ವವನ್ನು ಮತ್ತು ಭವ್ಯ ಪರಂಪರೆಯನ್ನು ೨ ಶತಮಾನಗಳ ಕಾಲ ರಕ್ಷಿಸಿದ ಕೀರ್ತಿ ಹೊಯ್ಸಳರದಾಗಿದೆ. ಕ್ಷೇಮಾಭಿವೃದ್ಧಿ ಕಾರ್ಯಗಳಿಗೆ, ದಾನಧರ್ಮಗಳಿಗೆ, ಶಿಕ್ಷಣ ಸಾಹಿತ್ಯದ ಸಂವರ್ಧನೆಗೆ ಹೊಯ್ಸಳರ ಕಾಲವು ಅದ್ವಿತೀಯವೆನಿಸಿಕೊಂಡಿದೆ.

ಶಿಲ್ಪಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ಹೊಯ್ಸಳರ ಸಾಧನೆ ಭಾರತಕ್ಕಷ್ಟೇ ಅಲ್ಲದೇ ಸಮಸ್ತ ಜಗತ್ತಿಗೆ ಒಂದು ಭವ್ಯ ಹಾಗೂ ಸ್ಮರಣೀಯ ಕೊಡುಗೆಯಾಗಿದೆ. ಹೊಯ್ಸಳರು ನಿರ್ಮಿಸಿದ ದೇವಾಲಯಗಳು ಭಾರತೀಯ ವಾಸ್ತುಶಿಲ್ಪ ಸೌಂದರ್ಯವನ್ನು ಶ್ರೀಮಂತಗೊಳಿಸಿವೆ. ಅದು 'ಹೊಯ್ಸಳ ಶೈಲಿ' ಎಂದೇ ಪ್ರಸಿದ್ಧವಾಗಿದೆ. ಭಾರತೀಯ ಚರಿತ್ರೆಯಲ್ಲಿ ವೈಭವಪೂರ್ಣವೆನಿಸಿದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ

ಭೂಮಿಕೆಯನ್ನು ಸಿದ್ಧಗೊಳಿಸಿದ ಶ್ರೇಯಸ್ಸು ಹೊಯ್ಸಳರಿಗೆ ಸಲ್ಲುತ್ತದೆ. ಈ ವಂಶದ ಪ್ರಸಿದ್ಧ ದೊರೆಯೆಂದರೆ ವಿಷ್ಣುವರ್ಧನ (ಕ್ರಿ.ಶ. ೧೧೦೮ ರಿಂದ ೧೧೫೨) ಈತನು ೪೦ ವರ್ಷಗಳ ಆಳ್ವಿಕೆಯಲ್ಲಿ ಹೊಯ್ಸಳ ರಾಜ್ಯವು ವಿಸ್ತಾರಗೊಂಡಿದ್ದಷ್ಟೇ ಅಲ್ಲದೇ ಅದಕ್ಕೊಂದು ಸ್ವತಂತ್ರ ಅಸ್ತಿತ್ವ ಒದಗಿತು. ಇವನು ವೈಷ್ಣವ ಧರ್ಮೀಯನಾಗಿದ್ದು ಇವನ ಪಟ್ಟದ ಅರಸಿ ಶಾಂತಲಾದೇವಿ ಜಿನಭಕ್ತೆಯಾಗಿದ್ದದ್ದು ಇವರ ಧರ್ಮಸಮನ್ವಯ ಹಾಗೂ ಪರಧರ್ಮ ಸಹಿಷ್ಣುತೆಯ ನಿದರ್ಶನಗಳಾಗಿವೆ. ಶಾಂತಲೆ 'ನಾಟ್ಯರಾಣಿ', 'ನಾಟ್ಯ ಸರಸ್ವತಿ' ಎಂಬ ಬಿರುದು ಹೊಂದಿದ್ದಳು.

ಇವರ ನಂತರ ೩ನೇ ಬಲ್ಲಾಳ (ಕ್ರಿ.ಶ. ೧೨೯೧ ರಿಂದ ೧೩೪೩) ಈ ವಂಶದ ಕೊನೆಯ ಪ್ರಬಲ ದೊರೆ. ಇವನ ಕಾಲಕ್ಕೆ ಅಲ್ಲಾವುದ್ದೀನ್ ಖಿಲ್ಜಿ ಸಾಮ್ರಾಜ್ಯದ ಮೇಲೆ ದಾಳಿ ನಡೆಸಿದ. ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕನಾದ ಮಲ್ಲಿಕಾಫರನ ಕೈಯಲ್ಲಿ ೩ನೇ ಬಲ್ಲಾಳ ಸೋತನು. ದಕ್ಷಿಣ ಭಾರತದಲ್ಲಿ ಪ್ರಥಮ ಬಾರಿಗೆ ಮುಸ್ಲಿಂ ಆಳ್ವಿಕೆ ಸ್ಥಾಪನೆಗೊಂಡಿತು. ಹಿಂದೂ ದೇವಾಲಯಗಳು ಧ್ವಂಸಗೊಂಡು ಅಪಾರ ಸಂಪತ್ತು ಲೂಟಿ ಆಯಿತು. ಹಿಂದೂ ಧರ್ಮಸಂಸ್ಕೃತಿಗಳು ವಿನಾಶದ ಅಂಚಿಗೆ ಬಂದು ನಿಂತವು. ಇಂಥ ಸಂಕಷ್ಟದ ಪ್ರಸಂಗದಲ್ಲಿ ಇವುಗಳನ್ನು ಉಳಿಸಿ ಬೆಳೆಸುವ ಮಹಾನ್ ಪ್ರಯತ್ನ ಒಂದು ನಡೆಯಿತು. ಈ ಪ್ರಯತ್ನದ ಫಲವೇ ವಿಜಯನಗರ ಸಾಮ್ರಾಜ್ಯದ ಉದಯ.

**ವಿಜಯನಗರದ ಅರಸರು (ಕ್ರಿ.ಶ. ೧೩೩೬ ರಿಂದ ೧೬೬೫):**

ಕರ್ನಾಟಕದ ಚರಿತ್ರೆಯಲ್ಲಿ ವಿಜಯನಗರ ಸ್ಥಾಪನೆಯು ಒಂದು ಅವಿಸ್ಮರಣೀಯ ಅಧ್ಯಾಯವಾಗಿದೆ. ಕನ್ನಡ ನಾಡಿನ ಸಂಸ್ಕೃತಿ, ಧರ್ಮ, ಕಲೆ, ಸಾಮಾಜಿಕ ಸ್ಥಿರತೆ, ಅನ್ಯ ಧರ್ಮೀಯರ ದಾಳಿಗಳಿಗೆ ತುತ್ತಾಗುತ್ತಿದ್ದ ಸಂದಿಗ್ಧ ಸನ್ನಿವೇಶದಲ್ಲಿ ಈ ನಾಡಿನವರೇ ಆದ ಹಕ್ಕ-ಬುಕ್ಕ ಸಹೋದರರು ಶ್ರೀವಿದ್ಯಾರಣ್ಯ ಗುರುಗಳ ಆಶೀರ್ವಾದದಿಂದ ವಿಜಯನಗರ ಸಾಮ್ರಾಜ್ಯವನ್ನು ಕ್ರಿ.ಶ. ೧೩೩೬ ರಲ್ಲಿ ದಕ್ಷಿಣ ಭಾರತದ ಬಲಾಢ್ಯ ರಾಜ್ಯವನ್ನಾಗಿ ಕಟ್ಟಿ ಬೆಳೆಸಿದರು. ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ಈ ಸಾಮ್ರಾಜ್ಯವು ಉಚ್ಛ್ರಾಯ ಸ್ಥಿತಿಯನ್ನು ತಲುಪಿ ವಿಶ್ವದಾಖಲೆಯನ್ನು ತಲುಪಿ ವಿಶ್ವವಿಖ್ಯಾತಿಯನ್ನು ಪಡೆಯಿತು. ಸುಮಾರು ೨೩೦ ವರ್ಷಗಳ ಕಾಲ ದಕ್ಷ ಆಡಳಿತವನ್ನು ನೀಡಿ ವೈಭವಪೂರ್ಣವಾದ ಪರಿಸರವನ್ನು ಸೃಷ್ಟಿಸಿದ ವಿಜಯನಗರದ ಅರಸರು ಕನ್ನಡ ನಾಡಿನ ಕೀರ್ತಿಪತಾಕೆಯನ್ನು ದಿಗಂತಕ್ಕೆ ಹಾರಿಸಿ ಮರೆಸಿದರು. ಸ್ವಧರ್ಮಸಂರಕ್ಷಣೆ ಮತ್ತು ಪರಧರ್ಮಸಹಿಷ್ಣುತೆ ವಿಜಯನಗರ ಸಾಮ್ರಾಜ್ಯದ ಘನತೆಯನ್ನು ಪರಾಕಾಷ್ಠತೆಗೆ ಏರಿಸಿದ

ದಿವ್ಯದರ್ಶನಗಳಾಗಿದ್ದವು. ವಿಜಯನಗರದ ರಾಜಧಾನಿ ಆಗಿದ್ದ ಹಂಪಿಯ ವೈಭವವನ್ನು ಅನೇಕ ವಿದೇಶಿ ಪ್ರವಾಸಿಗರು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ.

ತುಂಗಭದ್ರೆಯ ದಕ್ಷಿಣ ಪ್ರದೇಶಗಳ ಮೇಲೆ ವಿಜಯನಗರ ಸಾಮ್ರಾಜ್ಯವು ತನ್ನ ಪ್ರಭುತ್ವವನ್ನು ಸ್ಥಾಪಿಸಿತು. ಭಾರತೀಯ ಸಂಸ್ಕೃತಿ ಮತ್ತು ಪರಂಪರೆಗಳನ್ನು ರಕ್ಷಿಸಿ ಅವುಗಳನ್ನು ಅಭ್ಯುದಯಗೊಳಿಸಿತು. ತನ್ಮೂಲಕ ಕನ್ನಡ ನಾಡಿನ ವಿಶಿಷ್ಟ ಸಂಸ್ಕೃತಿಯನ್ನು ರಕ್ಷಿಸಿ ಪೋಷಿಸಿತು. ಧರ್ಮ, ಸಾಹಿತ್ಯ, ಕಲೆಯ ಕ್ಷೇತ್ರಗಳಲ್ಲಿ ಅಮೋಘ ಸಾಧನೆಗಳನ್ನು ಮಾಡಿತು.



# ಅಧ್ಯಾಯ : ನಾಲ್ಕು

# ಕುಂತಣಬಾಗೆಯ ಸಾಂಸ್ಕೃತಿಕ ಚರಿತ್ರೆ

ಒಂದು ಶತಮಾನದಿಂದ ಕರ್ನಾಟಕದ ಸಂದರ್ಭದಲ್ಲಿ ನಡೆದಿರುವ ಸಾಂಸ್ಕೃತಿಕ ಕುರಿತಂತೆ ವಿದ್ವಾಂಸರ ಓದು, ಬರಹ, ವಾದ-ವಿವಾದ, ಚರ್ಚೆ, ವಿಚರ್ಚೆಗಳು ಅಪಾರ. ಪಾಶ್ಚಾತ್ಯ 'Culture' ಪದಕ್ಕೆ ಸಂವಾದಿಯಾದ ನಮ್ಮಲ್ಲಿ ಸ್ವೀಕರಿಸಲ್ಪಟ್ಟಿರುವ ಸಂಸ್ಕೃತಿ ಒಂದು ಜನಾಂಗದ ಜೀವನದ ವಿಧಾನಕ್ಕೆ ವ್ಯಾಖ್ಯಾನಿಸಲ್ಪಟ್ಟಿದೆ. ಈ ಜೀವನದ ವಿಧಾನದಲ್ಲಿ ಆ ಜನಾಂಗದ ಉಡಿಗೆ, ತೊಡಿಗೆ, ಆಚಾರ, ವಿಚಾರ, ನಡೆ-ನುಡಿ, ಕಲೆ, ಕ್ರೀಡೆ, ಆಟ-ಪಾಠ, ಪಾತ್ರ, ಪದಾರ್ಥ, ಸಂಘ-ಸಂಸ್ಥೆ, ರೀತಿ, ಅಂದಾಜು, ನ್ಯಾಯ ನೀತಿ, ಭಾಷೆ, ಬಂಧತ್ವ, ಆಹಾರ, ವಿಹಾರ, ಹೀಗೆ ಇನ್ನೂ ಅನೇಕ ಸಂಗತಿಗಳ ಒಟ್ಟು ಮೊತ್ತವನ್ನು ಸಂಸ್ಕೃತಿ ಎಂದಿದ್ದಾರೆ. ಇನ್ನೂ ಕೆಲವರು ಅಂತಹ ಜನಾಂಗಗಳ ಬುದ್ಧಿಶಕ್ತಿ, ವಾಕ್‌ಶಕ್ತಿ, ಸಂಘಶಕ್ತಿಗಳ ಫಲಶೃತಿಯನ್ನು ಪರಿಗಣಿಸಿ ಅಧ್ಯಯನ ಮಾಡಿದ್ದಾರೆ. ಒಟ್ಟಿನ ಮೇಲೆ ಒಂದು ಜನಾಂಗದ ಸಾಹಿತ್ಯ, ಸಂಗೀತ, ಧರ್ಮ, ತತ್ವ, ಆಧ್ಯಾತ್ಮ, ಆಚಾರ-ವಿಚಾರಗಳನ್ನು ಸಂಸ್ಕೃತಿಯೆಂದು ಇದರ ಅಧ್ಯಯನವನ್ನೇ ಸಾಂಸ್ಕೃತಿಕ ಇತಿಹಾಸ ಎಂದಿದ್ದಾರೆ.[೧]

ಸಂಸ್ಕೃತಿ ಎಂದರೆ ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಜೀವನ ವಿಧಾನ ಎಂದರ್ಥ. ದೇವಸ್ಥಾನ, ಶಾಸನಗಳು, ಸಾಮಾಜಿಕ ವ್ಯವಸ್ಥೆ, ಆಡಳಿತ ವ್ಯವಸ್ಥೆ, ವಿದ್ಯಾಭ್ಯಾಸ, ಆರ್ಥಿಕ ವ್ಯವಸ್ಥೆ, ಸಾಹಿತ್ಯಿಕ ವಾತಾವರಣ, ಕಲೆ ಮತ್ತು ವಾಸ್ತುಶಿಲ್ಪ ಮೊದಲಾದವುಗಳಿಂದ ಕುಂತಣಬಾಗೆಯ ಸಾಂಸ್ಕೃತಿಕ ಪರಿಸರವನ್ನು ತಿಳಿದುಕೊಳ್ಳಬಹುದು.[೨]

ಸಂಸ್ಕೃತಿ ಎಂಬ ಶಬ್ದವು ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು ವೈಯಕ್ತಿಕ ಆಚರಣೆಗಳವರೆಗೂ ಅದರ ಮೇಲೆ ಹಬ್ಬಿದೆ. ಮಾನವ ಜನಾಂಗಗಳ ಚರಿತ್ರೆಯನ್ನು ಚಿತ್ರಿಸುವಾಗ ಬಳಸುವ ಇನ್ನೊಂದು ಪದ 'ನಾಗರಿಕತೆ' ಎಂಬುದು ಆಂಗ್ಲ ಭಾಷೆಯಲ್ಲಿ ಅದನ್ನೇ 'Culture and Civilizaiton' ಎಂದು ಕರೆಯುವರು. ಇವರು ಪದಗಳನ್ನು ಅನೇಕ ಸಂದರ್ಭಗಳಲ್ಲಿ ಸಮನಾರ್ಥಗಳೆಂಬಂತೆ ಬಳಸಲಾಗುತ್ತದೆ.[೩] ಎಲ್ಲಾ ಮಾನವ ಜನಾಂಗಗಳು (ಗುಂಪು) ಒಂದು ಬಗೆಯ ಸಾಂಸ್ಕೃತಿಕ ಚರಿತ್ರೆಯನ್ನು ಹೊಂದಿರುತ್ತದೆ.

---

೧. ಡಾ. ಚಂದ್ರಶೇಖರ ಪಾಟೀಲ (ಸಂ.) : ಸಂಕ್ರಮಣ, ದಿನಪತ್ರಿಕೆ, ಜನೇವರಿ-ಫೆಬ್ರುವರಿ, ೨೦೦೧, ಪು. ೧೧.

೨. ಡಾ. ಎಚ್.ತಿಪ್ಪೇರುದ್ರಸ್ವಾಮಿ, ಎಚ್ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ೧೯೬೮, ಪು. ೧,
ಪಿ.ಜಿ.ಕೆಂಪಣ್ಣವರ (ಸಂ.) : ಜೈನ ಕ್ಷೇತ್ರಗಳ ಐತಿಹ್ಯ, ರಾಯಭಾಗ ತಾಲೂಕಿನ ಸಾಹಿತ್ಯದರ್ಶನ, ಪು. ೧೧.

೩. ಡಾ. ಕೆ.ಜಿ. ಗುರುಮೂರ್ತಿ : ಧರ್ಮ ಮತ್ತು ರಾಜಕೀಯ, ಅಥಣಿ, ಪು. ೧೦.

ಒಂದು ಗುಂಪನ್ನು ಅಥವಾ ಸಂಸ್ಥೆಯನ್ನು ನಾಗರಿಕತೆಯ ನಿಟ್ಟಿನಲ್ಲಿ ಅಭ್ಯಾಸ ಮಾಡಲು ಅವರ ಚರಿತ್ರೆ, ಜನರ ಜೀವನ, ಇತರ ಸಂಸ್ಕೃತಿಗಳೊಡನೆ ಹೊಂದಿರುವ ಸಂಬಂಧ ಮುಂತಾದ ಎಲ್ಲ ಅಂಗ ಅಂಶಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಹೀಗೆ ಸಮಾಜ ಅಥವಾ ಸಂಸ್ಕೃತಿಯನ್ನು ಇಡಿಯಾಗಿ ಅಭ್ಯಾಸ ಮಾಡುವುದರಿಂದ ಅದರ ಆದಿ-ಅಂತ್ಯಗಳನ್ನು ಸೇರಿಸಿ ಅದನ್ನು ಅರ್ಥಮಾಡಿಕೊಳ್ಳಲು ಸುಲಭವಾಗುತ್ತದೆ.[೪]

ಜನರ ಬದುಕಿನ ರೀತಿ ನೀತಿ, ಮಾರ್ಗ ಅನುಸರಿಸುವ ಧರ್ಮ, ಕಟ್ಟಿದ ಕಲೆ, ಅವರ ಆಗುಹೋಗುಗಳು ಮತ್ತು ಮೌಲ್ಯಗಳು ಇತ್ಯಾದಿ ಅಧ್ಯಯನವನ್ನು ಸಾಮಾಜಿಕ ಅಧ್ಯಯನ, ಸಾಂಸ್ಕೃತಿಕ ಅಧ್ಯಯನ ಎಂದು ಕರೆಯುವುದುಂಟು.[೫]

ಒಂದು ಪ್ರದೇಶ ಅಥವಾ ನಾಡಿನ ಚರಿತ್ರೆಯೆಂದರೆ ಆ ಪ್ರದೇಶವನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜವಂಶಗಳ ಇತಿಹಾಸವೆಂಬ ಭಾವನೆ ಪ್ರಚಲಿತದಲ್ಲಿದೆ. ಚರಿತ್ರೆಯನ್ನು ನಿರೂಪಿಸುವ ಸಾಹಿತ್ಯ ಗ್ರಂಥಗಳಲ್ಲಿ ರಾಜಕೀಯ ಚರಿತ್ರೆ ಪ್ರಧಾನವಾಗಿರುತ್ತದೆ. ಒಂದು ನಾಡು ಎಂದರೆ ಅಲ್ಲಿ ಬದುಕಿದ ಜನಸಮೂಹ. ಹೀಗೆ ಅಲ್ಲಿ ಬದುಕಿದ ನಿಜವಾದ ಇತಿಹಾಸವೆಂದರೆ ಈ ಜನತೆಯ ಇತಿಹಾಸವೇ ಆಗಿದೆ. ನಮ್ಮ ನಾಡಿನ ಇತಿಹಾಸವನ್ನು ಅನುಕೂಲಕರವಾದ ರೀತಿಯಲ್ಲಿ ವಿಭಜಿಸಿದ ರಾಜರುಗಳು, ರಾಜವಂಶಗಳು ನಮಗೆ ತುಂಬಾ ಸಹಾಯಕಾರಿಯಾಗಿವೆ. ಉದಾ : ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ ಹೀಗೆ ಮುಂತಾದ ಪ್ರಮುಖ ಘಟ್ಟಗಳನ್ನು ಗುರುತಿಸಬಹುದು. ಈ ವಂಶಜರ ಇತಿಹಾಸವೇ ನಾಡಿನ ಇತಿಹಾಸದ ರಚನೆಗೆ ಅಸ್ಥಿಪಂಜರವಿದ್ದಂತೆ.[೬]

ಕರ್ನಾಟಕಕ್ಕೆ ಸಂಬಂಧಿಸಿರುವಂತೆ ಆಡಳಿತದ ಕುರಿತಾಗಿ ನಮಗೆ ಲಭ್ಯವಿರುವ ಐತಿಹಾಸಿಕ ಆಧಾರಗಳನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಶಾತವಾಹನರಿಂದ ಹಿಡಿದು ಮೈಸೂರು ಅರಸರವರೆಗೂ ಕರ್ನಾಟಕವನ್ನಾಳಿದ ರಾಜವಂಶಗಳು ಹಲವಾರು. ಅದರಲ್ಲಿಯೇ ಚಿಕ್ಕಪುಟ್ಟ ರಾಜವಂಶಗಳಿಗೆ ಲೆಕ್ಕ ಇಲ್ಲ ಎಂದು ಹೇಳಬಹುದು. ರಾಜ್ಯತ್ವದ ಆದರ್ಶವನ್ನು ಮತ್ತು ಸಮಾಜದ ಸುವ್ಯವಸ್ಥೆಯ ಸ್ವರೂಪವನ್ನು ಶೃತಿ,ಸ್ಮೃತಿ ಮೊದಲಾದ ಹಿಂದೂ ಧರ್ಮಗ್ರಂಥಗಳು ನಿರ್ಣಯಿಸಿ ನಿರೂಪಿಸಿದವು. ರಾಜ್ಯದ ಆಡಳಿತ ಕ್ರಮದಿಂದ ಹಿಡಿದು ಧಾರ್ಮಿಕ, ಸಾಮಾಜಿಕ ಸ್ವರೂಪಗಳನ್ನು ಶಿಕ್ಷಣ,

---

೪. ಡಾ. ಕೆ.ಜಿ. ಗುರುಮೂರ್ತಿ : ಧರ್ಮ ಮತ್ತು ರಾಜಕೀಯ, ಅಥಣಿ, ಪು. ೧೦.

೫. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧.

೬. ಅದೇ.

ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ಸಾಹಿತ್ಯ, ಸಂಸ್ಕೃತಿ ಮೊದಲಾದವುಗಳನ್ನು ನಿರೂಪಿಸಿದವು. ಈ ಆಧಾರದ ಮೇಲೆ ರಾಜಶಕ್ತಿಯ ಹಿನ್ನೆಲೆಯ ನಿಯಂತ್ರಣದಲ್ಲಿ ಇವು ಬೆಳೆದುಬಂದವು. ಇದನ್ನು ಅರಿಯಲು ಇರುವ ಆಧಾರಗಳಲ್ಲಿ ಮುಖ್ಯವಾಗಿ ಶಾಸನಗಳು, ವಿದೇಶಿ ಬರಹಗಳು ಇವಲ್ಲದೆ ಭೂ ಅಗೆತದಿಂದ ದೊರೆತಿರುವ ಅವಶೇಷಗಳು ನಾಣ್ಯಗಳು ಧರ್ಮಗ್ರಂಥಗಳು ಸಾಹಿತ್ಯಕೃತಿಗಳು ಇತ್ಯಾದಿ ಎಂದು ಹೇಳಬಹುದು.[೭]

ಈ ಮೊದಲು ಹೇಳಿರುವಂತೆ ಕುಂತಣಬಾಗೆ ಹಲವು ಅರಸು ಮನೆತನಗಳ ಹಾಗೂ ಸಂಸ್ಥಾನಿಕರ ಆಳ್ವಿಕೆಗೆ ಒಳಪಟ್ಟಿತ್ತು. ಹೀಗಾಗಿ ಈ ಅರಸು ಮನೆತನವು ಬಿಟ್ಟು ಹೋದಂತಹ ಐತಿಹಾಸಿಕ ಪ್ರತಿಬಿಂಬಗಳಿಂದ ಮುಖ್ಯವಾಗಿ ಕುಂತಣಬಾಗೆಯ ಪ್ರಾದೇಶಿಕ ವಿವರಗಳನ್ನಾಧರಿಸಿ ಇಲ್ಲಿನ ಸಾಂಸ್ಕೃತಿಕ ಇತಿಹಾಸ ನಿರೂಪಿಸುವ ಸಾಧ್ಯತೆಯಿದೆ.

**ಆಡಳಿತ :**

ನಮ್ಮ ಕನ್ನಡ ನಾಡಿಗೆ ಸುದೀರ್ಘವಾದ ರಾಜಕೀಯ ಹಾಗೂ ಸಾಂಸ್ಕೃತಿಕ ಪರಂಪರೆ ಇದೆ. ಇಲ್ಲಿ ಆಳಿದ ಅರಸರು ಪ್ರಜೆಗಳ ಹಿತಕ್ಕಾಗಿ ಶ್ರಮಿಸಿದ್ದಾರೆ. ನಮ್ಮದೇ ಆದ ಕಲೆ, ಸಾಹಿತ್ಯ, ವಾಸ್ತುಶಿಲ್ಪ ಮುಂತಾದವುಗಳನ್ನು ಪೋಷಿಸಿ ಬೆಳೆಸಿದ್ದಾರೆ. ಸಮನ್ವಯ ನಮ್ಮ ರಾಜ್ಯದ ಜನರ ಒಂದು ವಿಶಿಷ್ಠ ಗುಣ. ನಾವು ಎಲ್ಲರನ್ನೂ ಪ್ರೀತಿ-ವಿಶ್ವಾಸಗಳಿಂದ ಕಂಡಿದ್ದೇವೆ. ಈ ಮೂಲಕ ಪ್ರತ್ಯೇಕ ಎನ್ನಬಹುದಾದ ಕರ್ನಾಟಕ ಸಂಸ್ಕೃತಿಯನ್ನು ರೂಫಿಸಿಕೊಂಡಿದ್ದೇವೆ. ಪ್ರಾಚೀನ ಕಾಲದಿಂದಲೂ ರಾಜಪ್ರಭುತ್ವಕ್ಕೆ ಒಳಪಟ್ಟ ನಮ್ಮ ರಾಜ್ಯ ಕೀರ್ತಿಶಾಲಿಗಳಾದ ಅರಸರನ್ನು ಕಂಡಿದೆ. ನಮ್ಮ ಸಂಸ್ಕೃತಿಯನ್ನು ಉಳಿಸಲು ಬೆಳೆಸಲು ಶ್ರಮಿಸಿದ್ದಾರೆ.[೮] ಪ್ರಾಚೀನ ಕರ್ನಾಟಕದಲ್ಲಿ ಆಡಳಿತ ವ್ಯವಸ್ಥೆ ಸಮರ್ಪಕವಾಗಿ ಮತ್ತು ಸಮರ್ಥವಾಗಿ ಮುಂದುವರೆಯುವಲ್ಲಿ ಅಧಿಕಾರ ವಿಕೇಂದ್ರೀಕರಣ ಮಾಡಿದ್ದು ತಿಳಿದುಬರುತ್ತದೆ.[೯]

**ಕೇಂದ್ರಾಡಳಿತ :**

ಕೇಂದ್ರಾಡಳಿತದಲ್ಲಿ ಚಕ್ರವರ್ತಿಗಳು, ನಂತರ ನಾಡಾಳಿತದಲ್ಲಿ ಮಹಾಮಂಡಳೇಶ್ವರರು, ಊರಿನ ಆಡಳಿತದ ಘಟ್ಟಗಳಾದರೆ, ವರ್ತಕ ಶ್ರೇಣಿಗಳು, ಅಗ್ರಹಾರಗಳನ್ನು ಮಹಾಜನರು ಗ್ರಾಮಗಳಲ್ಲಿ ಗಾವುಂಡರು, ಪ್ರಭುಗಾವುಂಡರು ಆಳ್ವಿಕೆ ನಡೆಸುತ್ತಿದ್ದರು. ಮಹಾಸಾಮಂತರು, ಮಹಾದಂಡನಾಯಕ

---

೭. ಡಾ. ಎಚ್.ತಿಪ್ಪೇರುದ್ರಸ್ವಾಮಿ, ಎಚ್ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ೧೯೬೮, ಪು. ೧೭೬.
೮. ವಿವಿಧ ಲೇಖಕರು ಕನ್ನಡ ಪರಂಪರೆ ಮೈಸೂರು, ೧೯೮೩, ಪು. ೬೩.
೯. ಡಾ. ಎಸ್.ಕೆ.ಕೊಪ್ಪಾ : ತರ್ದವಾಡಿ ನಾಡು : ಒಂದು ಅಧ್ಯಯನ, ಇಂಡಿ, ೧೯೯೦, ಪು. ೯೪.

ಎಂಬ ಅಧಿಕಾರಿಗಳಿದ್ದರು. ಅದರಂತೆ ಯುವರಾಜರ ನೇಮಕವು ಜಾರಿಯಲ್ಲಿತ್ತು.[೧೦] ಪ್ರಾಚೀನ ಭಾರತದ ರಾಜಕೀಯ ಚಿಂತಕರ ಪ್ರಕಾರ ರಾಜ್ಯದಲ್ಲಿ ಏಳು ಅಂಗಗಳು(ಸಪ್ತಾಂಗ). ಸ್ವಾಮಿ (ರಾಜ), ಅಮಾತ್ಯ (ಮಂತ್ರಿ), ರಾಷ್ಟ್ರ (ರಾಜ್ಯ), ದುರ್ಗ(ಕೋಟೆ), ಬಲ (ಸೈನ್ಯ) ಮತ್ತು ಮಿತ್ರ. ರಾಜನು ಉಳಿದ ಆರು ಅಂಗಗಳಿಂದ ತನ್ನ ಶಕ್ತಿಯನ್ನು ಗಳಿಸಿಕೊಂಡು ಅವರೆಲ್ಲರಿಗಿಂತ ಅತ್ಯುನ್ನತ ಸ್ಥಾನದಲ್ಲಿ ಪರಮಾಧಿಕಾರವನ್ನು ಹೊಂದಿರುತ್ತಿದ್ದನು.[೧೧]

**ಅರಸ :**

ರಾಜನ ಚರಿತ್ರೆ ಮತ್ತು ಆದರ್ಶಗಳನ್ನು ಆತನ ಬಿರುದು ಪ್ರಶಸ್ತಿಗಳಿಂದ ಕಂಡುಕೊಳ್ಳಬಹುದು. ರಾಜನಾದವನು ರಾಜಯೋಗಕ್ಷೇಮವನ್ನು ಪ್ರತ್ಯೇಕವಾಗಿ ವಿಚಾರಿಸಿ ಆಗಾಗ ಸಂಚರಿಸಬೇಕೆಂದು ನೀತಿಗ್ರಂಥಗಳು ತಿಳಿಸಲ್ಪಡುತ್ತವೆ.[೧೨] ರಾಜನು ಒಂದು ದೃಷ್ಟಿಯಲ್ಲಿ ಆಡಳಿತ ವ್ಯವಸ್ಥೆಯ ನೆತ್ತಿಯಾಗಿದ್ದನು. ರಟ್ಟರ ಆಸ್ಥಾನಕವಿ ಪಾರ್ಶ್ವನಾಥ ಪಂಡಿತನು ರಾಜನಲ್ಲಿರಬೇಕಾದ ಆರು ಗುಣಗಳನ್ನು ಈ ರೀತಿ ಹೇಳಬಯಸಿದ್ದಾನೆ. ಅವುಗಳೆಂದರೆ ರಾಜನಲ್ಲಿನ ಜ್ಞಾನ, ರಚನಾತ್ಮಕ ಸಾಮರ್ಥ್ಯ, ಅಧಿಕಾರ, ವೈಭವ, ಸ್ವಯಂಪೂರ್ಣತೆ ಮತ್ತು ಪರಾಕ್ರಮ. ಈ ಗುಣಗಳನ್ನು ರಟ್ಟರ ಅರಸ ಕಾರ್ತವೀರ್ಯನು ಹೊಂದಿದ್ದನೆಂದು ಬೆಳಗಾಂ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಕಲ್ಲೋಳ್ ಶಾಸನ ಉಲ್ಲೇಖಿಸುತ್ತದೆ.[೧೩]

ಒಂದು ಗ್ರಾಮದ ಜೀವನವು ಆ ಗ್ರಾಮ ದೇವಸ್ಥಾನದ ಸುತ್ತ ನಿರೂಪಿತವಾಗುತ್ತಿದ್ದಂತೆ ಒಂದು ನಾಡಿನ ಜನಜೀವನವು ಆಳುವ ಅರಸನನ್ನು ಅವಲಂಬಿಸಿರುತ್ತದೆ.[೧೪] ರಾಜನು ತನ್ನ ಸಿಂಹಾಸನಕ್ಕೆ ಉತ್ತರಾಧಿಕಾರಿಯನ್ನು ತಾನು ಜೀವಿಸಿರುವಾಗಲೇ ಯೋಗ್ಯ ರಾಜಕುಮಾರನನ್ನು ನೇಮಕ ಮಾಡುತ್ತಿದ್ದನು. ಸಾಮಾನ್ಯವಾಗಿ ಯುವರಾಜ ಪದವಿ ಚಕ್ರವರ್ತಿಯ ಹಿರಿಯ ಮಗನಿಗೆ ಸಲ್ಲುತ್ತಿತ್ತು.[೧೫] ಉದಾ : ೨ನೇ ಪುಲಿಕೇಶಿಯ ತಂದೆ ಕೀರ್ತಿವರ್ಮನು ತೀರಿಹೋದಾಗ ಅವನ ಚಿಕ್ಕಪ್ಪನಾದ ಮಂಗಳೇಶನನ್ನು ರಾಜನನ್ನಾಗಿ ಮಾಡಲಾಯಿತು. ತಂದೆಗೆ ಮಗನು ಯುವರಾಜನಾಗಬಹುದು. ಆದರೆ ರಟ್ಟದೊರೆ ನಾಲ್ಕನೆಯ

---

೧೦. ಡಾ. ಎಸ್.ಕೆ.ಕೊಪ್ಪಾ : ತರ್ದವಾಡಿ ನಾಡು : ಒಂದು ಅಧ್ಯಯನ, ಇಂಡಿ, ೧೯೯೦, ಪು. ೯೪-೯೫.

೧೧. ಪ್ರೊ. ಬಿ.ಶೇಕ ಅಲಿ (ಪ್ರ.ಸಂ.), ಡಾ. ಅ.ಸುಂದರ (ಸಂ.) : ಕರ್ನಾಟಕ ಚರಿತ್ರೆ ಸಂಪುಟ-೧, ಪ್ರಸಾರಾಂಗ, ಕ.ವಿ.ವಿ. ಹಂಪಿ, ೧೯೯೭, ಪು. ೪೪೯.

೧೨. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೩೩.

೧೩. ಜರ್ನಲ್ ಆಫ್ ದಿ ರಾಯಲ್ ಏಶಿಯಾಟಿಕ್ ಸೊಸೈಟಿ, ಸಂಪುಟ. ೯ ಪು. ೨೨೦.

೧೪. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೨೨.

೧೫. ಡಾ. ಎಸ್.ಕೆ.ಕೊಪ್ಪಾ : ತರ್ದವಾಡಿ ನಾಡು : ಒಂದು ಅಧ್ಯಯನ, ಇಂಡಿ, ೧೯೯೦, ಪು. ೯೭.

ಕಾರ್ತವೀರ್ಯನಿಗೆ ಅವನ ಸಹೋದರ ಯುವರಾಜನಾಗಿರುವುದನ್ನು ಸು. ಕ್ರಿ.ಶ. ೧೨೮೪ ರ ಬೆಳಗಾಂ ಶಾಸನದಿಂದ ತಿಳಿದುಕೊಳ್ಳಲಾಗಿದೆ.[೧೬]

**ರಾಣಿಯರು :**

ಪ್ರಾಚೀನ ಕರ್ನಾಟಕದ ಅರಸು ಮನೆತನಗಳ ರಾಣಿಯರು ಕೇವಲ ಅಂತಃಪುರದ ರಾಜಕುಮಾರಿಗಳಾಗಿರದೇ ರಾಜಕೀಯ ರಂಗದಲ್ಲಿಯೂ ಪ್ರಧಾನಪಾತ್ರ ವಹಿಸುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಪಾಣಿನಿ ಹೇಳುವಂತೆ 'ಅಸೂರ್ಯಂ ಪಶ್ಯೆ' ಯರಾಗಿರಲಿಲ್ಲ. ರಾಜನು ತನ್ನ ರಾಣಿಯರನ್ನು ರಾಜ್ಯದ ಬೇರೆ ಬೇರೆ ಭಾಗಗಳನ್ನು ಆಳಲು ನೇಮಕ ಮಾಡುತ್ತಿದ್ದನು.[೧೭] ಕುಂತಣಬಾಗೆಯ ಪ್ರದೇಶವನ್ನು ಆಳಿದ ಕಲ್ಯಾಣಿ ಚಾಲುಕ್ಯ, ರಟ್ಟರು ಹೀಗೆ ಇತ್ಯಾದಿ ರಾಜಕೀಯ ವಂಶಗಳು ತಮ್ಮ ರಾಣಿವರ್ಗಕ್ಕೆ ಆಡಳಿತ ಸವಿ ಉಣಿಸುತ್ತಿದ್ದ ಬಗ್ಗೆ ತಿಳಿದುಬರುತ್ತದೆ. ಆಡಳಿತದ ಹೊಣೆ ಹೊತ್ತ ರಾಣಿಯರು ರಾಜಕೀಯ ಚತುರೆಯರು ಆಗಿರುತ್ತಿದ್ದರು. ಯುದ್ಧಕಲೆ ಹೆಚ್ಚಿನ ಅರ್ಹತೆಯಾಗಿತ್ತು. ೬ನೇ ವಿಕ್ರಮಾದಿತ್ಯನ ಹಿರಿಯ ರಾಣಿ ಪಟ್ಟಮಹಾದೇವಿ ಮಲಯವತಿ ಅಗ್ರಹಾರ ಪಿರಿಯ ಕೆರೆಯೂರನ್ನು ಆಳುತ್ತಿದ್ದಳೆಂದು ಚಿಕ್ಕೆರೂರಿನ ಶಾಸನದಿಂದ ತಿಳಿದುಬರುತ್ತದೆ.[೧೮] ಕುಂತಣಬಾಗೆ ಪ್ರದೇಶವು ರಟ್ಟದೊರೆ ೨ನೇಯ ಕಾರ್ತವೀರ್ಯ್ಯನ ಕಾಲಕ್ಕೆ ಸೇರಿದ್ದು ಕುಹೂಂಡಿ-೩೦೦೦ದ ಪ್ರಾಂತವಾಗಿತ್ತು.[೧೯]

ಕೆಲವೊಮ್ಮೆ ರಾಣಿಯರು ರಾಜಧಾನಿಯಲ್ಲಿದ್ದುಕೊಂಡು ಬೇರೆ ಬೇರೆ ಭಾಗಗಳನ್ನು ನೋಡಿಕೊಳ್ಳುತ್ತಿದ್ದರು. ಉದಾ: ತ್ರಿಭುವನಮಲ್ಲನ ರಾಣಿ ಜಗ್ಗಲದೇವಿಯು ಕಲ್ಯಾಣದಲ್ಲಿರುವಾಗ ಒಬ್ಬ ವ್ಯಾಪಾರಿಯು ತಂದ ಸುಂದರ ಜಿನ ವಿಗ್ರಹವನ್ನು ಅವಳು ಕೊಂಡುಕೊಂಡಳೆಂದು ಚಕ್ರವರ್ತಿಯು ನಿನ್ನ ಆಳ್ವಿಕೆಯ ಊರಲ್ಲಿ ಪ್ರತಿಷ್ಠಾಪಿಸು ಎಂದು ಹೇಳಿದಾಗ ಅವಳು ಅದನ್ನು ಇಂಗುಳಿಕೆಯಲ್ಲಿ ಪ್ರತಿಷ್ಠಾಪಿಸಿದಳೆಂದು ಶಾಸನದಿಂದ ತಿಳಿದುಬರುವುದು.[೨೦]

---

೧೬. ಈ. ಹುಲ್ಚ : ಎಫಿಗ್ರಾಫಿಯಾ ಇಂಡಿಕಾ, ಸಂಪುಟ-೮, ನವದೆಹಲಿ, ೧೯೮೧, ಪು. ೭೦.

೧೭. ಅಗರವಾಲ : ಇಂಡಿಯಾ ಆ್ಯಜ್ ನೋನ್ ಟು ಪಾಣಿನಿ, ಪು. ೪೦೫.

೧೮. ಡಾ. ಪಿ. ಬಿ. ದೇಸಾಯಿ: ಜೈನಿಜಂ ಇನ್ ಸೌತ್ ಇಂಡಿಯಾ ಆ್ಯಂಡ್ ಸಮ್ ಜೈನಾ ಎಫಿಗ್ರಾಫ್ಸ್, ಸೊಲ್ಲಾಪುರ, ೧೯೫೭, ಪು. ೨೦೯.

೧೯. ಜಿ.ಎನ್. ಉಪಾಧ್ಯ, ಡಾ. ದೇವರಕೊಂಡಾರೆಡ್ಡಿ (ಸಂ.) : ಕ.ವಿ.ವಿ. ಶಾಸನಸಂಪುಟ-೬, ಕ.ವಿ.ವಿ. ಹಂಪಿ, ೨೦೦೧.

೨೦. ಡಾ. ಪಿ.ಬಿ. ದೇಸಾಯಿ : ಜೈನಿಸಂ ಇನ್ ಸೌತ್ ಇಂಡಿಯಾ ಆ್ಯಂಡ್ ಜೈನ ಸಮ್ ಎಫಿಗ್ರಾಫ್ಸ್, ಸೊಲ್ಲಾಪುರ, ೧೯೫೭, ಪು. ೨೦೯.

ಅರಸರು ತಮ್ಮ ರಾಣಿಯರ ಉಪಭೋಗ ನಿಮಿತ್ಯವಾಗಿ ಒಂದು ಇಲ್ಲವೇ ಹಲವು ಗ್ರಾಮಗಳನ್ನು ಇನಾಮು ಕೊಡುತ್ತಿದ್ದರು. ಇವು ಭಕ್ತರ ಗ್ರಾಮಗಳೆಂದು ಹೆಸರುವಾಸಿಯಾಗಿವೆ. ಈ ಭತ್ತದ ಗ್ರಾಮಗಳ ಪರಿಕಲ್ಪನೆ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಅಸ್ತಿತ್ವದಲ್ಲಿತ್ತು.[೨೦]

ಕರ್ನಾಟಕದಲ್ಲಿ ವೈಭವದಿಂದ ಆಳ್ವಿಕೆಯನ್ನು ನಡೆಸಿ ಈ ನಾಡಿನ ಸಂಸ್ಕೃತಿಯನ್ನು ಉಳಿಸಿ ಬೆಳೆಸಿದ ಅರಸು ಮನೆತನಗಳು ಹಲವು ಅವುಗಳಲ್ಲಿ ಕದಂಬರಿಂದ ಮೊದಲ ಮಾಡಿ ವಿಜಯನಗರ ಸಾಮ್ರಾಜ್ಯದವರೆಗೆ ಇಂತಹ ಅರಸುಮನೆತನಗಳ ವಿಸ್ತಾರ ಕಂಡು ಬರುತ್ತದೆ. ವಿಜಯನಗರದ ಪತನ ನಂತರ ಚಿಕ್ಕಪುಟ್ಟ ಸಂಸ್ಥಾನಗಳು ಸ್ವತಂತ್ರವಾಗಿ ನಿಲ್ಲಲು ಯತ್ನಿಸಿದಾಗ ಪ್ರತಿಫಲವಾಗಿ ಕೆಳದಿ, ಬೆಳವಡಿ ಮತ್ತು ಬೆಳಗಾವ ಜಿಲ್ಲೆಯ ಕಿತ್ತೂರು ಮತ್ತು ಕುಂತಣಬೇಗೆಯ ಪ್ರದೇಶದ ದೇಸಗತಿ ಮನೆತನಗಳು ಕೀರ್ತಿ ಪ್ರತಿಷ್ಠೆಗೆ ಮನೆತನದ ಮಹಿಳೆಯರು ವೈವಿಧ್ಯಮಯ ಕೊಡುಗೆಯನ್ನು ಸಲ್ಲಿಸಿದ್ದಾರೆ. ಕನ್ನಡ ನಾಡಿನ ಶಾಸನ ಕಾವ್ಯಗಳು ಮಹಿಳೆಯರ ಶೌರ್ಯ, ಔದಾರ್ಯ, ಕಲಾಶ್ರೀಮಂತಿಕೆಯನ್ನು ಹೊಗಳಿವೆ. ಅಳಿದುಳಿದ ದೇವಸ್ಥಾನ ಮತ್ತು ವಾಸ್ತುಶಿಲ್ಪಗಳು ಅವರ ಶಿಲ್ಪಕಲಾಪ್ರೇಮವನ್ನು ಬಿಂಬಿಸುತ್ತವೆ.[೨೧]

ಚರಿತ್ರೆಯ ದೃಷ್ಟಿಯಿಂದ ಗಮನಿಸಿದರೆ ಯಾವ ಮಹಿಳೆಯನ್ನು ಬದಿಗಿರಿಸಿ ರಾಜರು ರಾಣಿಯರು ತಮ್ಮ ವಂಶದ ಏಳಿಗೆ ಸಲ್ಲಿಸಿದ ಸೇವೆ ಗಮನಾರ್ಹ ಎಂದು ಹೇಳಬಹುದು. ಆಡಳಿತಕ್ಕೆ ಸಂಬಂಧಪಟ್ಟಂತೆ ೨ನೇ ಪುಲಕೇಶಿಯ ಮಗನಾದ ಚಂದ್ರಾದಿತ್ಯನ ರಾಣಿ ವಿಜಯಮಹಾದೇವಿ ಚಂದ್ರಾದಿತ್ಯ ತೀರಿಹೋದಾಗ ವಿಜಯ ಮಹಾದೇವಿ ಕ್ರಿ.ಶ. ೬೪೫ ರ ಸುಮಾರಿಗೆ ರಾಜಕೀಯ ಸೂತ್ರವನ್ನು ಹಿಡಿದುಕೊಂಡ ಬಗ್ಗೆ ಸ್ಮರಿಸಬಹುದು.[೨೨] ಪ್ರಾಚೀನ ಕರ್ನಾಟಕದ ಚರಿತ್ರೆಯಲ್ಲಿ ರಾಣಿಯರ ಪಾತ್ರ ಅಮೋಘವಾಗಿದೆ.

**ಮಂತ್ರಿ :**

ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ರಾಜನೇ ಪ್ರಧಾನವಾಗಿದ್ದನು. ಅವನಿಗೆ ಸಹಾಯಕರಾಗಿ ಮಂತ್ರಿಗಳು ಇತರೇ ಅಧಿಕಾರಿಗಳು ಇರುತ್ತಿದ್ದರು. ಆಡಳಿತದಲ್ಲಿ ಅತ್ಯಂತ ಮಹತ್ವದ ಹಾಗೂ ಜವಾಬ್ದಾರಿಯುತ ಸ್ಥಾನವೆಂದರೆ ಮಂತ್ರಿಸ್ಥಾನ. ಮಾನಸೋಲ್ಲಾಸ ಕೃತಿಯ ಲೇಖಕನೇ ಸೋಮೇಶ್ವರನು ೭ ಅಥವಾ ೮ ಜನರ ಮಂತ್ರಿಮಂಡಲವನ್ನು ಪ್ರಸ್ತಾಪಿಸಿದ್ದಾನೆ. ಯಶಸ್ತಿಲಕ ಚಂಪೂವಿನ ಸೋಮದೇವ

---

೨೦. ಡಾ. ಬಿ.ಎಲ್.ರೈಸ್ : ಎಫಿಗ್ರಫಿ ಇಂಡಿಕಾ, ಸಂಪುಟ-೮, ನವದೆಹಲಿ, ೧೯೨೫, ಪು. ೩೩೯.

೨೧. ಡಾ. ಚೆನ್ನಕ್ಕ ಪಾವಟೆ : ಪ್ರಾಚೀನ ಕರ್ನಾಟಕದ ರಾಣಿಯರು, ಧಾರವಾಡ, ೧೯೮೭, ಪು. ೫.

೨೨. ಅದೇ.

ಸೂರಿಯು ಯಾವಾಗಲೂ ಒಬ್ಬ ಮಂತ್ರಿಯನ್ನೇ ಅವಲಂಬಿಸಿರಬಾರದೆಂದು ಎಚ್ಚರಿಸಿದ್ದಾನೆ. ನೇಮಿನಾಥನ 'ನೀತಿ ವಾಕ್ಯಾಮೃತ'ದಲ್ಲಿ ರಾಜ, ಮಂತ್ರಿ, ರಾಜ ಪ್ರಜೆಗಳ ಸಂಬಂಧ, ದಂಡನೀತಿ, ಸ್ವಾಮಿ, ಅಮಾತ್ಯ, ಸೇವಕ ಹೀಗೆ ಆಡಳಿತ ನಿರ್ವಹಣೆ ಕುರಿತು ವಿಸ್ತಾರ ವಿವರಣೆಯಿದೆ.[೨೪]

ಆಡಳಿತ ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ರಾಜನೀತಿ ಪ್ರಧಾನನಾಗಿದ್ದನು. ಅವನಿಗೆ ಸಹಾಯಕರಾಗಿ ಮಂತ್ರಿಗಳು ಇರುತ್ತಿದ್ದರು. ರಾಜನ ಆಜ್ಞೆಗೂ ಜನರ ಬೇಡಿಕೆಗಳು ಮಧ್ಯವರ್ತಿಯಾಗಿ ಕೆಲಸ ಮಾಡುತ್ತಿದ್ದ ಅಧಿಕಾರಿ, ಪ್ರಧಾನನಾಗಿದ್ದನು. ಪ್ರಧಾನಿ ಇಲ್ಲದೆ ಇತರ ಮಂತ್ರಿಗಳು, ದಂಡನಾಯಕರು, ಸೇನಾಪತಿ, ಧರ್ಮಾಧಿಕರಣ, ಧರ್ಮಕಾರಣಿಕ ಈ ಮೊದಲಾದ ಹೆಸರುಗಳು ಕಲ್ಯಾಣ ಚಾಲುಕ್ಯರ ಆಡಳಿತದಲ್ಲಿ ಕಂಡುಬರುವ ಮಂತ್ರಿಮಂಡಲ ಅಧಿಕಾರಿಗಳ ಹೆಸರುಗಳಾಗಿವೆ. ಕಲಚೂರಿ ವಂಶ ಸ್ಥಾಪಕ ಜೋಗಮ (ಕಣ್ಣಮ) ೬ನೆಯ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಸಾಮಂತನಾಗಿ, ಮಂತ್ರಿಯಾಗಿ ಕಾರ್ಯನಿರ್ವಹಿಸುತ್ತಿದ್ದನು.[೨೫] ಕೌಟಿಲ್ಯನು ಬಾಹುಂದಲೇ ಎಂಬುವಳ ಅಭಿಪ್ರಾಯವನ್ನು ಆಧರಿಸಿ ಆಕೆಯ ಅಭಿಪ್ರಾಯಗಳಿಗೆ ತನ್ನ ಸಮ್ಮತಿಯನ್ನು ಕೊಡುತ್ತಾನೆ. ಅವಳ ಪ್ರಕಾರ ''ವ್ಯಕ್ತಿಗಳು ಯಾರೇ ಆಗಲಿ ಅವರು ಉತ್ತಮ ವಂಶಸಂಭೂತರು, ವಿವೇಕಿಗಳು, ಧೀರರು, ಪ್ರಾಮಾಣಿಕರು ಆಗಿರಬೇಕೆಂದು'' ಅಂದರೆ ಮಂತ್ರಿಗಳ ಆಯ್ಕೆಯು ಸಂಪೂರ್ಣವಾಗಿ ಯೋಗ್ಯತೆಯ ಆಧಾರದ ಮೇಲೆ ನಡೆಯುತ್ತಿತ್ತು.[೨೭] ರಟ್ಟವಂಶದ ಕಾರ್ತವೀರ್ಯನ ಮಂತ್ರಿ ಚಾವುಂಡನು ರಟ್ಟರಾಜ್ಯದ ಏಳಿಗೆಯಲ್ಲಿ ಮಹತ್ವದ ಪಾತ್ರ ವಹಿಸಿದ್ದನೆಂದು ಕ್ರಿ.ಶ. ೧೦೮೦ ರ ರಾಯಭಾಗ ಶಾಸನದಿಂದ ತಿಳಿದುಬರುತ್ತದೆ.[೨೮]

**ದಂಡನಾಯಕ :**

ದಂಡನಾಯಕ ಎಂಬ ಪದ ಸೈನ್ಯದ ನಾಯಕ ಮತ್ತು ಆಡಳಿತದ ಮುಖ್ಯಾಧಿಕಾರಿ ಎಂಬೆರಡು ಅರ್ಥವನ್ನು ಸಮಯಕ್ಕೆ ಅನುಗುಣವಾಗಿ ಸೂಚಿಸುತ್ತವೆ.[೨೯] ರಟ್ಟದೊರೆ ಕಾರ್ತವೀರ್ಯನು ದಂಡನಾಯಕನಾದ ಕಂಕಣನೂರ ಪ್ರಭು ಬಾಚರಸ ಹಾಗೂ ಆತನ ಪತ್ನಿ ಪರಸಿಯವ್ವೆಯ ಉಲ್ಲೇಖ ರಾಯಭಾಗ ಶಾಸನದಲ್ಲಿ ಬರುವುದು. ಈ ದಂಪತಿಗಳ ಮಗ ಶ್ರೀಕಾಂತ ಹೆಮ್ಮಣ್ಣಯ್ಯಂ (ಹೆಮ್ಮಣ್ಣನಾಯಕ) ಅತ್ಯಂತ

---

೨೪. ಡಾ. ಜಿ.ಎಸ್.ದೀಕ್ಷಿತ್., ಜಿ. ರಾಮಸ್ವಾಮಿ, ಶ್ರೀನಿವಾಸ ರಿತ್ತಿ (ಸಂ.) : ನೀತಿವಾಕ್ಯಾಮೃತಂ, ಹಂಪಿ, ೨೦೦೦, ಪು. ೧೭.

೨೫. ಕರ್ನಾಟಕ ಇತಿಹಾಸ ಪರಿಚಯ, ಮೈಸೂರು, ೧೯೯೯, ಪು. ೬೯.

೨೬. ಡಾ. ಆರ್.ಶಾಮಾಶಾಸ್ತ್ರಿ : ಕೌಟಿಲ್ಯನ ಅರ್ಥಶಾಸ್ತ್ರ, ಮೈಸೂರು, ೧೯೬೫, ಪು. ೧೨-೧೪.

೨೭. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೨೮.

೨೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೬, ಪು. ೫೯.

೨೯. ಡಾ. ಎಚ್.ತಿಪ್ಪೇರುದ್ರಸ್ವಾಮಿ, ಎಚ್ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ೧೯೬೭, ಪು. ೧೭೭.

ಪರಾಕ್ರಮಿಯಾಗಿದ್ದ.[೩೦] ಈ ನಿಟ್ಟಿನಲ್ಲಿ ಅರಸನಿಗೆ ಸಹಾಯ ಮಾಡಲು ಮಂತ್ರಿಮಂಡಲವಿತ್ತು. ಅದನ್ನು ಮಂತ್ರಾಲೋಚನೆ ಸಭೆ ಎಂದು ಕರೆಯಲಾಗುತ್ತಿತ್ತು. ಈ ಸಭೆಯಲ್ಲಿ ಮಂತ್ರಿಗಳು, ದಂಡನಾಯಕರು, ಇನ್ನೂ ಮುಂತಾದ ಅಧಿಕಾರಿಗಳಿರುತ್ತಿದ್ದರು. ಪ್ರಮುಖ ಆಡಳಿತ ವಿಭಾಗಗಳಲ್ಲಿ ಒಬ್ಬ ಪ್ರಧಾನ ಸಂಧಿವಿಗ್ರಹಿ, ಬಾನಸಿವರ್ಗಡೆ, ಅಂತಪುರಾಧ್ಯಕ್ಷ ಇನ್ನೂ ಹಲವಾರು ಅಧಿಕಾರಿಗಳಿರುತ್ತಿದ್ದರು.

**ಸಂಧಿ ವಿಗ್ರಹಿ :**

ಮಂತ್ರಿಮಂಡಲದಲ್ಲಿ ಮತ್ತೊಬ್ಬ ಪ್ರಮುಖ ವ್ಯಕ್ತಿ ಎಂದರೆ ಸಂಧಿವಿಗ್ರಹಿ. ಪ್ರಾಚೀನ ಕಾಲದಲ್ಲಿ ಇವನ ಸ್ಥಾನವು ಆಧುನಿಕ ವಿದೇಶಾಂಕ ವ್ಯವಹಾರಗಳ ಸಚಿವರಂತೆ ಇತ್ತು. ರಾಜ್ಯದ ಆಗುಹೋಗುಗಳನ್ನು ಅವಲಂಬಿಸಿದ್ದರಿಂದ ಆತನ ಸ್ಥಾನ ಸಾಮಂತರಸನಿಗೆ ಸಮಾನವಾಗಿತ್ತು.[೩೧] ಸಂಧಿವಿಗ್ರಹಿಯು ಪರರಾಷ್ಟ್ರಗಳೊಡನೆ ವ್ಯವಹರಿಸಬೇಕಿದ್ದರಿಂದ ಹಲವಾರು ಭಾಷೆಗಳನ್ನು ಲಿಪಿಗಳನ್ನು ತಿಳಿದುಕೊಂಡಿರಬೇಕಾಗಿತ್ತು. ನಕುಳಾರ್ಯ ಎನ್ನುವ ಸಂಧಿವಿಗ್ರಹಿಗೆ ಚತುರ್ಭಾಷಾ ಲಿಖಿತ್ಥಕ ವಿದ್ಯಾಧರಂ ಎಂಬ ಬಿರುದಿತ್ತು.[೩೨] ರಟ್ಟರ ಆಸ್ಥಾನದ ಕವಿ ಪಾರ್ಶ್ವನಾಥ ಪುರಾಣದಲ್ಲಿ ಆ ಕಾಲದ ಸಂಧಿವಿಗ್ರಹಿ ಕುರಿತು ಈ ರೀತಿ ಚಿತ್ರಣ ಕೊಡುತ್ತಾನೆ. ''ಸಹಜ ಪ್ರಜ್ಞೆ ನಶೇಷ ದೇಶ ಲಿಪಿ ಸದ್ಭಾಷಾ ವಿಶೇಷ ಜಾತಾ ಸಹಿತಂ ನೀತಿ ವಿನೂತ ಸೂಕ್ತಿದಕ್ಷಂ ಜಿತಾಕಂ ನಿರಾ ॥ ಗ್ರಹನುದ್ಯದ್ಗುಣ ರತ್ನ ಸಂಗ್ರಹ ನೆನಿಪ್ಪಂಗ ಮಹಾ ಸಂಧಿರಾಧಿಶ್ವರಂ''[೩೩] ಎಂದು ವಿವರವಿದೆ.

ಕಲ್ಯಾಣ ಚಾಲುಕ್ಯರು ಬೆಳ್ವೊಲ-೩೦೦ ಹಾಗೂ ಪುಲಿಗೆರೆ ೩೦೦ ರ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದರೆಂದು ಮತ್ತು ರಟ್ಟರು ತಮ್ಮ ಕೂಹಂಡಿ-೩೦೦೦ ಪ್ರದೇಶದಲ್ಲಿ ೧೪ ವಿಭಾಗಗಳನ್ನು ಮಾಡಿದಂತೆ ತಿಳಿದುಬರುತ್ತದೆ. ರಟ್ಟರ ಚತುಸ್ಸೀಮೆಯನ್ನು ಉತ್ತರದ ಕೃಷ್ಣಾ, ದಕ್ಷಿಣದ ಮಲಪ್ರಭಾ, ಈಗಿನ ಬೆಳಗಾವಿ ಜಿಲ್ಲೆಯ ಪೂರ್ವಪಶ್ಚಿಮ ಸೀಮೆ ಮತ್ತು ಕುಂತಣಬಾಗೆ ಮಹಾರಾಷ್ಟ್ರದ ಚಂದಗಡ ಮತ್ತು ಗಡಿಹಂಗ್ಲಜ್ ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲೂಕುಗಳು ಇದರಲ್ಲಿ ಸಮಾವೇಶಗೊಂಡಿವೆ.

---

೩೦. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೬, ಪು. ೫೯.
೩೧. ಆರ್.ರಾಮಾಶಾಸ್ತ್ರಿ (ಸಂ.) : ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್, ಸಂ.೯, ಮದ್ರಾಸ್, ೧೯೪೧, ಪು. ೧೫೮.
೩೨. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೩೨.
೩೩. ಡಾ. ಶಿ.ಬಾ.ಪಾಟೀಲ : ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಪು. ೯೧.

**ಸಂಖ್ಯೆಯ ವಿಭಾಗಗಳು :**

ತೇರದಾಳ-೧೨,[೩೪] ಸೋಲು-೩೦,[೩೫] ಸುಗಂಧವರ್ತಿ-೧೨,[೩೬] ಹುಬ್ಬಳ್ಳಿ-೧೨,[೩೭] ವೇಣುಗ್ರಾಮ-೩೦,[೩೮] ಕೊರವಳ್ಳಿ-೧೫೦,[೩೯] ಹೊರಗಟ್ಟಿ-೭೦[೪೦] ಇವುಗಳ ಒಟ್ಟು ಸಂಖ್ಯೆ ೩೨೩ ಆಗುತ್ತದೆ.

**ಸಂಖ್ಯೆ ತಿಳಿಯದ ವಿಭಾಗಗಳು :**

ಕುರಂಬೆಟ್ಟ ಕಂಪನ,[೪೧] ಮಲೆನಾಡು,[೪೨] ಕುಂದರಗಿ,[೪೩] ಪೂವಿನಬಾಗಿ,[೪೪] ಕುಂಡಿಪಟ್ಟಣ[೪೫] ಹಾಗೂ ಕುಹೂಂಡಿ ಪಟ್ಟಣಗಳೆಂದು ರಟ್ಟರ ಪಟ್ಟಣಗಳೆಂದು ಹೆಸರಿಸಲಾಗಿದೆ.

**ಗ್ರಾಮಾಡಳಿತ (ಹಳ್ಳಿ ಆಡಳಿತ) :**

ಗ್ರಾಮದ ಕುಂದು-ಕೊರತೆಗಳನ್ನು ಮುಖ್ಯವಾಗಿ ರಾಜನಿಗೆ ಹೇಳಿ ಅಲ್ಲಿಂದ ಪರಿಹಾರ ಸಿಗುವವರೆಗೆ ತೊಂದರೆಯಾಗದಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಗ್ರಾಮಾಡಳಿತಕ್ಕೆ ಕೊಡಲಾಗಿತ್ತು. ಇದರಲ್ಲಿ ೧) ಪಟ್ಟಣಗಳ ಆಡಳಿತ, ೨) ಅಗ್ರಹಾರಗಳ ಆಡಳಿತ, ೩) ಹಳ್ಳಿಗಳ ಆಡಳಿತ ಎಂದು ವಿಭಾಗ ಮಾಡಲಾಗಿತ್ತು. ಈ ವಿಭಜನೆಗೆ ಶಾಸನಗಳ ಒಪ್ಪಿಗೆಯಿದೆ. ಹೂವಿನಬಾಗಿಯ ಮಹಾಘಟಿಕಾಸ್ಥಾನ ಹಾಗೂ ಅಗ್ರಹಾರಗಳಲ್ಲಿ ಒಂದಾಗಿತ್ತು.[೪೬] ಆಡಳಿತ ಇದೇ ಪ್ರಕಾರವಾಗಿ ಸಾಗುತ್ತಿತ್ತೆಂದು ನಿರ್ದಿಷ್ಟವಾಗಿ ಹೇಳಲು ಆಧಾರ ಸಿಗುವುದಿಲ್ಲ. ರಾಜ್ಯಾಡಳಿತಕ್ಕೆ ಸಂಬಂಧಿಸಿದ ವಿಷಯಗಳು ಹೇಗೆ ವಿಫುಲವಾಗಿ ಸಿಗುವುದಿಲ್ಲವೋ

---

೩೪. ಕೆ.ಆರ್.ಆಯ್.ನಂ.೯೯೦, ಪು. ೩೩೪.
೩೫. ಎಫ್.ಡಬ್ಲ್ಯು.ಥಾಮಸ್ (ಸಂ.) : ಎಫಿಗ್ರಾಫಿಯಾ ಇಂಡಿಕಾ, ಸಂ. ೧೬, ಕಲ್ಕತ್ತ, ಪು. ೩.
೩೬. ಜೆ.ಬಿ.ಬಿ.ಎಸ್. ಸಂ. ೧೦, ಪು. ೨೬೦, ಕ್ರಿ.ಶ. ೧೧೫೧.
೩೭. ಡಾ. ಎಂ.ಎಂ. ಕಲಬುರ್ಗಿ, ಡಾ. ಬಿ.ಆರ್. ಹಿರೇಮಠ (ಸಂ.) : ಕನ್ನಡ ಶಾಸನ ಸಂಪದ, ಧಾರವಾಡ, ೧೯೬೮, ಪು. ೬೮.
೩೮. ಪ್ರೊ. ಸ್ಟೇನ್‌ಕೋನೋ ಎಫ್ ಮತ್ತು ಡಬ್ಲ್ಯೂ ಥಾಮಸ್ (ಸಂ.) : ಎಫಿಗ್ರಾಫಿಯಾ ಇಂಡಿಕಾ, ಸಂ. ೧೩, ಪು. ೧೮.
೩೯. ಜೆ.ಬಿ.ಬಿ.ಆರ್.ಎಸ್. ಸಂ. ೧೦, ಪು. ೨೪೬, ನೇಸರಗಿ, ಕ್ರಿ.ಶ. ೧೧೪೧.
೪೦. ಅದೇ, ಪು. ೨೪೬.
೪೧. ಅದೇ, ಪು. ೨೪೮.
೪೨. ಅದೇ, ಪು. ೯೮.
೪೩. ಡಾ. ಸೂರ್ಯನಾಥ ಕಾಮತ : ಬೆಳಗಾವಿಯ ಜಿಲ್ಲಾ ಗೆಜೆಟಿಯರ್, ಬೆಂಗಳೂರು, ೧೯೮೭, ಪು. ೮೮೦.
೪೪. ಕೆ.ಜಿ. ಕುಂದಣಗಾರ : ಇನ್ಸ್‌ಕ್ರಿಪ್ಷನ್ಸ್ ಇನ್ ನಾರ್ಥರ್ನ್ ಕರ್ನಾಟಕ ಆ್ಯಂಡ್ ಕೊಲ್ಲಾಪುರ ಸ್ಟೇಟ್, ಕೊಲ್ಲಾಪುರ, ೧೯೩೯, ಶಾಸನ ನಂ. ೬೩ ಕ್ರಿ.ಶ. ೧೧೨೭.
೪೫. ಅದೇ ಪು. ೧೦೭.
೪೬. ಕ.ವಿ.ಶಾಸನ ಸಂಪುಟ, ಹಂಪಿ, ಪು. ೫೮.

ಹಾಗೆಯೇ ಆಡಳಿತಕ್ಕೆ ಸಂಬಂಧಿಸಿದಂತೆ ಹೆಚ್ಚು ಮಾಹಿತಿ ದೊರೆಯುವುದಿಲ್ಲ. ಆದಾಗ್ಯೂ ಅಲ್ಲಿ ಇಲ್ಲಿ ದೊರೆತ ಅಲ್ಪಸ್ವಲ್ಪ ಮಾಹಿತಿಗಳನ್ನು ಆಧರಿಸಿ ಆಡಳಿತ ಚಿತ್ರಣವನ್ನು ಕೊಡಬಹುದು.

ಗ್ರಾಮದ ಘಟಕಗಳು ಪಟ್ಟಣ ಹಳ್ಳಿಗಳ ಸಮೂಹವನ್ನು ಸೂಚಿಸುತ್ತದೆಂದು ಮೊಟ್ಟ ಮೊದಲು ಡಾ. ಫ್ಲೀಟರು ಒಪ್ಪಿಕೊಂಡಿದ್ದಾರೆ.[೪೭] ಆಡಳಿತ ವಿಭಾಗದಲ್ಲಿ ಮತ್ತೆ ಉಪವಿಭಾಗಗಳನ್ನು ಮಾಡುವ ಈ ಪದ್ಧತಿ ಕರ್ನಾಟಕಕ್ಕೆ ವಿಶಿಷ್ಟವೆನ್ನುವಂತೆ ಬೆಳೆದು ಬಂದಿರುವುದು ಗಮನಾರ್ಹ. ಉಪವಿಭಾಗದ ಸಣ್ಣ ಘಟಕ ಗ್ರಾಮ. ಹಾಗೆಯೇ ನಾಡಿನಾಡಳಿತದಲ್ಲಿ ಅವುಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಇದ್ದಿತು. ಒಂದು ಊರನ್ನು ಇನ್ನೊಂದು ಊರಿನಿಂದ ಪ್ರತ್ಯೇಕಿಸಲು ಅಲ್ಲಿನ ಪ್ರಾಕೃತಿಕ ವ್ಯವಸ್ಥೆಯಲ್ಲಿ ಪ್ರಮುಖ ಆರ್ಥಿಕ ಬೆನ್ನೆಲುಬಾದ ಈ ಹಳ್ಳಿಗಳು ಮತ್ತು ಅಲ್ಲಿನ ಜನಜೀವನದ ಪ್ರಾಚೀನ ಮತ್ತು ಮದ್ಯಕಾಲೀನ ಶಾಸನಗಳಲ್ಲಿ ತುಂಬ ನಿಂತಿವೆ. ಪಟ್ಟಣ ಹಾಗೂ ಹಳ್ಳಿಗಳಲ್ಲಿ ಪ್ರಮುಖರು ಗಾವುಂಡರು. ಅಗ್ರಹಾರಗಳಲ್ಲಿ ಮಹಾಜನರು ಆಡಳಿತ ನಡೆಸುತ್ತಿದ್ದರು. ಪ್ರಭುಗಾವುಂಡರೆಂದು ಅವರಲ್ಲಿ ಕೆಲವರನ್ನು ಸಂಭೋದಿಸಿದುದುಂಟು. ಇವರು ಕೇಂದ್ರಾಡಳಿತಕ್ಕೂ, ಗ್ರಾಮಾಡಳಿತಕ್ಕೂ ಮಧ್ಯವರ್ತಿಗಳೆನ್ನಬಹುದು. ಮುಖ್ಯವಾಗಿ ಜನರ ಪ್ರತಿನಿಧಿಗಳೆಂದರೆ ಹೆಚ್ಚು ಉಚಿತವಾಗಿ ತೋರುತ್ತದೆಂದು ಎ.ಎಸ್. ಅಲ್ಟೇಕರ್ ಅಭಿಪ್ರಾಯಪಡುತ್ತಾರೆ.[೪೮]

**ಗಾವುಂಡರು :**

ಊರಿನ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು ನಿಂತಿರುವ ವ್ಯಕ್ತಿ. ಇವರು ನಮ್ಮೂರುಗಳಲ್ಲಿ ಸಾಮಾಜಿಕ, ಸಾಂಸ್ಕೃತಿಕ ಇತ್ಯಾದಿ ಸಾರ್ವಜನಿಕ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ನೆರವೇರಿಸಿದ್ದರು. ಗ್ರಾಮದಲ್ಲಿರುವ ಗಾವುಂಡರ ಸಂಖ್ಯೆಯನ್ನು, ಹೆಸರುಗಳನ್ನು, ಶಾಸನಗಳಿಂದ ತಿಳಿದುಕೊಳ್ಳಬಹುದು. ಪನ್ನಿರ್ವ ಗಾವುಂಡರು ತೆರದಾಳದಲ್ಲಿ ಇದ್ದರೆ[೪೯], ಹನ್ನಿರ್ವ ಗಾವುಂಡರು ಕಲ್ಲೊಳಿಯಲ್ಲಿದ್ದಾರೆ.[೫೦] ಕುಂತಣಬಾಗೆ ಪ್ರದೇಶದಲ್ಲಿಯೂ ಪ್ರಾಚೀನ ಕಾಲದಿಂದಲೂ ಗಾವುಂಡರುಗಳು ಇದ್ದರೆಂದು ತಿಳಿದುಬರುತ್ತದೆ. ಉದಾ : ಸನ್ಮಾನ್ಯ ಶ್ರೀ ವಿ.ಎಲ್.ಪಾಟೀಲ 'ಕೂಹೊಂಡಿ ಮೂಸಾಸಿರ' ದಲ್ಲಿರುವ ಪೂವಿನಬಾಗಿಯ ಗಾವುಂಡರು ಅನಾದಿ ಕಾಲದಿಂದಲೂ ಅನೇಕ ದಾನ-ದತ್ತಿಗಳನ್ನು ನೀಡುತ್ತಲೇ ಬಂದಿದ್ದಾರೆ ಎಂಬ ಸಂಗತಿ ನಿರ್ಮಿತವಾದದ್ದು ಇಂದಿಗೂ ಕೂಡ ಈ ಪ್ರದೇಶದ ಗಾವುಂಡರು

---

೪೭. ಜರ್ನಲ್ ಆಫ್ ದಿ ರಾಯಲ್ ಏಶಿಯಾಟಿಕ್ ಆಫ್ ಗ್ರೇಟ್ ಬ್ರಿಟನ್ ಆ್ಯಂಡ್ ಐಲ್ಯಾಂಡ ಪಾರ್ - ೧೯೧೨, ಪು. ೭೦೬.
೪೮. ಎ.ಎಸ್. ಅಲ್ಟೇಕರ್ : ರಾಷ್ಟ್ರಕೂಟ ಆ್ಯಂಡ್ ದೇರ್ ಟೈಮ್ಸ್, ಪೂನಾ, ೧೯೩೪, ಪು. ೧೪೯.
೪೯. ಡಾ. ಬಾ.ರಾ.ಗೋಪಾಲ: ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್, ಕ.ಸಂ.ಸ. ಧಾರವಾಡ, ೧೯೬೯.
೫೦. ಜೆ.ಬಿ.ಬಿ.ಆರ್.ಎಸ್. ಸಂ. ೧೧, ಪು. ೫.

ಹಲವಾರು ಸಂಘ-ಸಂಸ್ಥೆಗಳನ್ನು ಮುಂದುವರೆಸಿಕೊಂಡು ಬರುವಲ್ಲಿ ಯಶಸ್ವಿ ಗಾವುಂಡ-ರೆನಿಸಿಕೊಂಡಿದ್ದಾರೆ. ಈ ನಿಟ್ಟಿನಲ್ಲಿ ಎಲ್ಲ ಕಡೆಯೂ 'ಗೌಡಕಿ' ಎಂಬ ಅಧಿಕಾರ ಇಂದಿಗೂ ಹಾಗೆಯೇ ಉಳಿದುಕೊಂಡು ಬಂದಿರುವುದನ್ನು ನಾವು ಕಾಣಬಹುದು.

**ಆರ್ಥಿಕ ಸ್ಥಿತಿಗತಿ :**

ನಮ್ಮದು ಕೃಷಿ ಪ್ರಧಾನವಾದ ದೇಶ. ಬೇಸಾಯಕ್ಕೆ ಇಂದಿಗಿಂತಲೂ ಹೆಚ್ಚು ಪ್ರಾಚೀನ ಕಾಲದಲ್ಲಿ ಪ್ರೋತ್ಸಾಹದ ಜೊತೆಯಲ್ಲಿಯೇ ಪುರಸ್ಕಾರವಿತ್ತು. ಸಮಾಜದ ಮಹತ್ವದ ಭಾಗ ಆರ್ಥಿಕ ವ್ಯವಸ್ಥೆಯಾಗಿದೆ. ಈ ವ್ಯವಸ್ಥೆಯು ವಿಶಾಲವಾದ ಮೇರೆ ಹಾಗೂ ವೈವಿಧ್ಯತೆಯಿಂದ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಒಂದು ನಾಡಿನ ಒಂದು ಪ್ರದೇಶದ ಪ್ರಗತಿಯು ಅಲ್ಲಿನ ಅರ್ಥವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಯಾವುದೇ ಪ್ರದೇಶ ಆರ್ಥಿಕವಾಗಿ ಸಂಪತ್ಭರಿತವಾದಾಗ ಮಾತ್ರ ಸಮೃದ್ಧ ಸ್ವಾಭಿಮಾನದ ಬದುಕನ್ನು ನಡೆಸಿ ಸಮಗ್ರ ವ್ಯವಸ್ಥೆಯನ್ನು ಉತ್ತಮಗೊಳಿಸುವುದು ಸಾಧ್ಯವಾಗುತ್ತದೆ. ಕಷ್ಟಪಟ್ಟು ದುಡಿಯುವ ಮಣ್ಣಿನ ಮಕ್ಕಳಿಗೆ 'ಅನ್ನದಾತ'ರೆಂಬ ವಾತ್ಸಲ್ಯದ ನುಡಿಯುಂಟು.[೫೧] ಕೂಹೂಂಡಿನಾಡು ಫಲವತ್ತಾದ ಭೂಮಿಯನ್ನು ಒಳಗೊಂಡು ನಿಸರ್ಗ ಸಂಪತ್ತಿನಿಂದಲೂ ರೈತನ ದುಡಿಮೆಯಿಂದಲೂ ಪೂವಿನ ಬಾಗೆಯ ಪ್ರದೇಶ ಸಂಪತ್ ಭರಿತವಾಗಿತ್ತು.[೫೨]

ಕುಂತಣಬಾಗೆಯು ಪ್ರಾಚೀನ ಕಾಲದಿಂದಲೂ ಆರ್ಥಿಕವಾಗಿ ಮುಂದುವರೆದ ಪ್ರದೇಶವಾಗಿತ್ತೆಂಬುದನ್ನು ಪ್ರದೇಶದಲ್ಲಿಯ ದೇವಾಲಯಗಳು ಹಾಗೂ ಭೂಮಿಯ ಫಲವತ್ತತೆಯಿಂದ ನಾವು ಊಹಿಸಬಹುದಾಗಿದೆ. ಇಲ್ಲಿ ಕೃಷಿಯೇ ಪ್ರಮುಖ ಉದ್ಯೋಗವಾಗಿದ್ದು, ವಾಣಿಜ್ಯ ಬೆಳೆಗಳಾದ ಕಬ್ಬು, ಬಾಳೆ, ಗೋವಿನಜೋಳ, ಗೋಧಿ, ಅರಿಷಿಣ ಹೀಗೆಯೇ ಇತ್ಯಾದಿ ಬೆಳೆಗಳನ್ನು ಬೆಳೆಯಲಾಗುತ್ತಿದೆ. ಇಂದಿಗೂ ಕೂಡ ರಾಯಬಾಗ ಬಾಳೆಹಣ್ಣಿನ ವ್ಯಾಪಾರಕೇಂದ್ರವಾಗಿ ಪರಿಣಮಿಸಿವೆ. ಕೃಷಿಯೇತರ ಆರ್ಥಿಕ ಮೂಲಗಳು ಇವೆ. ಸಕ್ಕರೆ ಕಾರ್ಖಾನೆ, ರೇಷ್ಮೆ ಕೈಗಾರಿಕೆ, ವ್ಯಾಪಾರ ಸಹಕಾರವು ಉದ್ಯಮಿಗಳನ್ನು ಹೊಂದಿದ್ದು ಜನರು ಉನ್ನತ ಮಟ್ಟದ ಜೀವನವನ್ನು ಸಾಗಿಸುತ್ತಾರೆ.[೫೩]

---

೫೧. ಬಿ.ಎಲ್.ರೈಸ್ (ಸಂ.) ಎಫಿಗ್ರಾಫಿಯಾ ಕರ್ನಾಟಿಕ, ಸಂ. ೧೦, ಮೈಸೂರು, ೧೯೦೬, ಪು. ೨೮.
೫೨. ಕ.ವಿ.ವಿ. ಹಂಪಿ, ಪು. ೫೯.
೫೩. ಹೊಂಬೆಳಕು, ಪು. ೯.

**ಭೂ ಸಂಪತ್ತು :**

ಸಮಾಜದ ಮುಖ್ಯ ಆಸ್ತಿಯಾದ ಅರ್ಥವ್ಯವಸ್ಥೆಯಲ್ಲಿ ಭೂಸಂಪತ್ತು ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಒಂದು ಪ್ರದೇಶದ ಜನರು ತಮ್ಮ ಜೀವನದ ನಿರ್ವಹಣೆ ಮತ್ತು ಆರ್ಥಿಕ ಭದ್ರತೆಗೆ ಅಲ್ಲಿಯ ನಿಸರ್ಗ ಸಂಪತ್ತಾದ ಭೂಮಿಯನ್ನು ಆಶ್ರಯಿಸಿರುವುದು ಕಂಡುಬರುತ್ತದೆ. ಆಧುನಿಕ ಅರ್ಥಶಾಸ್ತ್ರದ ಪ್ರಕಾರ ಎಲ್ಲಾ ಕೊಡುಗೆಗಳು ಅಂದರೆ- ಮಣ್ಣು, ನೀರು, ಖನಿಜ, ಅರಣ್ಯ ಸಂಪತ್ತು ಇತ್ಯಾದಿ ಭೂಮಿಯಲ್ಲಿಯೇ ಸಮಾವೇಶಗೊಳ್ಳುತ್ತವೆ. ಹೀಗಾಗಿ ಭೂಮಿಯ ಅತ್ಯಂತ ಮಹತ್ವಪೂರ್ಣವಾದ ಸಂಪನ್ಮೂಲ ಮೂಲವೆಂದು ಪರಿಗಣಿಸಬಹುದು. ಪ್ರಾಚೀನ ಮಧ್ಯಕಾಲೀನದಲ್ಲೂ ದೇವಾಲಯಗಳಿಗೆ, ಮಠಗಳಿಗೆ, ಬಸದಿಗಳಿಗೆ, ಸ್ಮಾರಕಗಳಿಗೆ ದಾನಬಿಟ್ಟ ಭೂಮಿಯು ಬಹುಶ್ರೇಷ್ಠ ವಸ್ತುವೆಂದು ಭಾವಿಸುತ್ತಿದ್ದರು. ಉದಾ: ಕ್ರಿ.ಶ. ೧೦೪೪ ಹೂಲಿ ಶಾಸನವು ಇದು ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಹೂಲಿ ಎಂಬ ಗ್ರಾಮದಲ್ಲಿ ಲಭ್ಯವಾಗಿದೆ.[೫೪] ಈ ಶಾಸನವು ೬ನೇ ವಿಕ್ರಮಾದಿತ್ಯನಿಗೆ ಸೇರಿದ್ದು, ಈತನ ದಂಡಾಧಿಕಾರಿಯಾದ ಕಲಾದಿಯ ಬೋಳಗಡಿಯ ವೊಮ್ಮಗನು ಕೂಹುಂಡಿ-೩೦೦೦ ದ ಪ್ರಾಂತಾಧಿಕಾರಿಯಾಗಿದ್ದನು. ಈತನ ಹೆಂಡತಿಯಾದ ಲಚ್ಚೆಯಬ್ಬರಸಿಯೂ ಜೈನ ಬಸದಿಗೆ ಭೂಮಿ, ಹಣ, ದಾನಬಿಟ್ಟ ವಿಷಯವನ್ನು ಉಲ್ಲೇಖಿಸುತ್ತದೆ. ಈ ಭೂದಾನವನ್ನು ಅಪಹರಿಸಿದವರಿಗೆ ಒದಗಬಹುದಾದ ಕೇಡುಗಳಲ್ಲಿ ಆತನ ಭೂಮಿಯೂ ಬೆಳೆದಿರುವುದು ಒಂದಾಗಿತ್ತು.[೫೫] ಒಟ್ಟಿನಲ್ಲಿ ಉಪಜೀವನದ ಬಹುದೊಡ್ಡ ಮಾರ್ಗವಾದ ಬೇಸಾಯವು ಭೂಮಿಯನ್ನೇ ಅವಲಂಬಿಸಿತ್ತು. ಈ ಅಂಶಗಳಿಂದ ಭೂಮಿಯಿಂದ ಪ್ರಾಧಾನ್ಯತೆ ನಮಗೆ ತಿಳಿದುಬರುವುದು.

**ಭೂಮಿಯ ಪ್ರಕಾರಗಳು :**

ಅನಾದಿ ಕಾಲದಲ್ಲಿ ಒಕ್ಕಲುತನಕ್ಕೆ ಉಪಯೋಗಿಸುವ ಭೂಮಿಯನ್ನು ದೇವಮಾತೃಕವೆಂದು ಹಾಗೂ ನದಿ, ಕೆರೆ, ಬಾವಿ ಮುಂತಾದ ನೀರಾವರಿ ಸೌಕರ್ಯಗಳನ್ನು ಅವಲಂಬಿಸಿರುವುದನ್ನು ನದಿಮಾತೃಕರೆಂದು ಕರೆಯುವರು.[೫೬] ಶಾಸನಗಳಲ್ಲಿ ನೀರ್ಮಣ್ಣು[೫೭], ಕರುವನಗೆದ್ದೆ[೫೮], ಎಂದು ಮತ್ತು ಮಳೆಯ ಆಶ್ರಿತ

---

೫೪. ಎಲ್.ಡಿ.ಬಾರನೆಟ್ (ಸಂ.) : ಸಂಪುಟ-೧೮, ನವದೆಹಲಿ, ೧೯೨೫-೨೬, ಪು. ೧೭೧.

೫೫. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೬೨.

೫೬. ಅದೇ, ಪು. ೩೬೩.

೫೭. ಎಪಿಗ್ರಾಫಿಯಾ ಕರ್ನಾಟಿಕಾ, ಸಂ. ೪, ಮೈಸೂರು ೧೯೭೫, ಪು. ೧೬೧.

೫೮. ಡಿ.ಸಿ. ಸರ್ಕಾರ (ಪ್ರ.ಸಂ.) : ಎಸ್.ಆಯ್.ಆಯ್. ೨೦, ದೆಹಲಿ, ೧೯೬೫, ಪು. ೧೦೫.

ಬೆದ್ದಲು[೫೯], ಭೂಮಿಮತ್ತರ[೬೦] ಮತ್ತು ಎರೆಭೂಮಿ[೬೧], ಕಪ್ಪು ಮಣ್ಣಿನ ಭೂಮಿ ಇಲ್ಲವೇ ಕೆಂಗಾಡು[೬೨], ಮಳಲಕೆಯ[೬೩], ಹರಕೆಯಿ[೬೪], ಇಂತಹ ವಿಭಾಗವಿರುವ ಭೂಮಿಯನ್ನು ಕ್ರಿ.ಶ. ೧೦೪೮ ರ ರಟ್ಟರ ಶಾಸನವು ಬಿದ್ದಲೂ ಭೂಮಿ[೬೫] ಎಂದು ವರ್ಣಿಸುತ್ತದೆ.

**ವ್ಯವಸಾಯ :**

ಜನರ ಜೀವನೋಪಾಯದ ಮುಖ್ಯ ಕಸುಬುಗಳಾದ ಕೃಷಿ, ವ್ಯಾಪಾರ, ವಾಣಿಜ್ಯ, ಉದ್ಯೋಗಗಳನ್ನು ಒಳಗೊಂಡು ಸಮಸ್ತ ಆದಾಯಕ್ಕೆಲ್ಲ ವ್ಯವಸಾಯವು ಕೇಂದ್ರಬಿಂದುವಾಗಿತ್ತು. ಭಾರತದಲ್ಲಿ ಪೂರ್ವಕಾಲದಿಂದಲೂ ಬೆಳೆದು ಬಂದದ್ದು ವ್ಯವಸಾಯವೇ ಆಗಿದೆ. ಆದರೆ ವ್ಯವಸಾಯದ ಕುರಿತಂತೆ ಶಾಸನಗಳು ಸ್ಪಷ್ಟವಾದ ಚಿತ್ರಣವನ್ನು ಒದಗಿಸುವುದಿಲ್ಲ.[೬೬] ಹೊಲಗದ್ದೆ, ತೋಟಗಳನ್ನು ಬೆಳೆದಿದ್ದ ಫಸಲುಗಳ ಪ್ರಸ್ತಾಪ ಪ್ರಾಸಂಗಿಕವಾಗಿ ಕಾವ್ಯ ಶಾಸನಗಳಲ್ಲಿ ಬರುತ್ತದೆ. ಕುಂತಣಬಾಗೆಯ ಪ್ರದೇಶವನ್ನು ಒಳಗೊಂಡಂತೆ ಹೇಳುವುದಾದರೆ ಪ್ರಾಚೀನ ಕಾಲದಿಂದಲೂ ಕಬ್ಬು, ಗೋಧಿ, ಜೋಳಗಳನ್ನು ರಾಗಿ, ಹತ್ತಿ ಹಾಗೂ ಗೋಧಿ ಹೀಗೆ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಆರ್ಥಿಕ ಬೆಳೆಯಾದ ಕಬ್ಬನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುವುದುಂಟು.

ವ್ಯವಸಾಯಕ್ಕೆ ಕೇವಲ ಮಳೆಯನ್ನೇ ಅವಲಂಬಿಸಿದರೆ ಸಾಲದು. ಆದಕ್ಕಾಗಿ ನದಿ, ಕೆರೆ, ಬಾವಿ, ತಟಾಕ ಮತ್ತು ಹಳ್ಳಗಳ ಮುಖಾಂತರ ತಮ್ಮ ಬೆಳೆಗಳಿಗೆ ನೀರು ಪೂರೈಸುತ್ತಿದ್ದರೂ ಕೆರೆ-ಭಾವಿಗಳಿಲ್ಲದೇ ನದಿಯಿಂದಲೂ ಭೂಮಿಗೆ ನೀರನ್ನು ಉಣಿಸುತ್ತಿದ್ದರು. ರಟ್ಟರ ಕಾಲದ ಶಾಸನಗಳಲ್ಲಿ 'ಮಲಪ್ರಭಾಹಾರಿ' ಮಳಾಪಾರಿ ನದಿ ಎಂದು ಪ್ರಸ್ತಾಪ ಬರುತ್ತದೆ. ಅದೇ ನಿಟ್ಟಿನಲ್ಲಿ ಬೆಳಗಾವಿ ಜಿಲ್ಲೆಗೆ ಅದರಲ್ಲೂ ವಿಶೇಷವಾಗಿ ಈ ಪ್ರದೇಶಕ್ಕೆ ಘಟಪ್ರಭಾ ನದಿಯ ಎಡದಂಡೆಯ ಕಾಲುವೆಯ ಮುಖಾಂತರ ನೀರಿನ ಪೂರೈಕೆ ಇದ್ದದ್ದು ಇಂದಿಗೂ ತಾವುಗಳು ಗಮನಿಸಬಹುದಾದ ಸಂಗತಿ.[೬೭]

---

೫೯. ಡಿ.ಸಿ. ಸರ್ಕಾರ (ಪ್ರ.ಸಂ.) : ಎಸ್.ಆಯ್.ಆಯ್. ೨೦, ದೆಹಲಿ, ೧೯೬೫, ಪು. ೨೬೦.
೬೦. ಎಪಿಗ್ರಾಫಿಯಾ ಕರ್ನಾಟಿಕಾ, ಸಂ. ೧೪, ನಂ. ೧೯, ಕ್ರಿ.ಶ. ೧೦೨೧.
೬೧. ಆರ್.ರಾಮಾಶಾಸ್ತ್ರಿ (ಸಂ.) : ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್, ಸಂ.೯, ದೆಹಲಿ, ೧೯೬೫, ಪು. ೨೩೩.
೬೨. ಅದೇ, ಪು. ೨೬೦.
೬೩. ಅದೇ, ಪು. ೧೯೬.
೬೪. ಅದೇ.
೬೫. ಡಿ.ಸಿ. ಸರ್ಕಾರ., ಜಿ.ಎಸ್.ಗಾಯಿ., (ಪ್ರ.ಸಂ.) : ಎಸ್.ಆಯ್.ಆಯ್. ೨೦, ನಂ. ೩೦೦, ಪು. ೧೦೫.
೬೬. ಡಾ. ಎಸ್.ಕೆ.ಕೊಪ್ಪಾ : ತರ್ದವಾಡಿ ನಾಡು : ಒಂದು ಅಧ್ಯಯನ, ಇಂಡಿ, ೧೯೯೦, ಪು. ೨೦೪.
೬೭. ಡಾ. ಸೂರ್ಯನಾಥ ಕಾಮತ : ಬೆಳಗಾವಿಯ ಜಿಲ್ಲಾ ಗೆಜೆಟಿಯರ್, ಬೆಂಗಳೂರು, ೧೯೫೬, ಪು. ೯೯೮.

**ಕೈಗಾರಿಕೆ :**

ಆರ್ಥಿಕ ವ್ಯವಸ್ಥೆಯಲ್ಲಿ ಕೈಗಾರಿಕೆ, ಕೃಷಿಗೆ ಇರುವಷ್ಟೇ ಪ್ರಾಮುಖ್ಯತೆಯಿದೆ. ರೈತನಿಗೆ ಅವಶ್ಯವಿರುವ ಸರಕು ಸಾಮುಗ್ರಿಗಳು ಉತ್ಪಾದನೆಯಾಗುವುದು ಕೈಗಾರಿಕೆಗಳಿಂದಲೇ. ಇದರ ಜೊತೆಗೆ ನಿತ್ಯ ಜೀವನೋಪಾಯದ ಬಳಕೆಯ ವಸ್ತುಗಳನ್ನು ನಿರ್ಮಿಸುತ್ತೇವೆ. ವ್ಯವಸಾಯ ಹಾಗೂ ಕಚ್ಚಾಪದಾರ್ಥಗಳೇ ಮೂಲವಾಗಿರುವುದರಿಂದ ಪ್ರಾಚೀನ ಕಾಲದ ಅರ್ಥವ್ಯವಸ್ಥೆಯಲ್ಲಿ ಕೈಗಾರಿಕೆಗಳು ವ್ಯವಸಾಯದ ನಂತರದ ಸ್ಥಾನವನ್ನು ಪಡೆದುಕೊಂಡಿವೆ.[೧೮]

**ಬೆಲ್ಲ ಮತ್ತು ಸಕ್ಕರೆ ಉತ್ಪಾದನೆ :**

ಅನಾದಿ ಕಾಲದಿಂದಲೂ ದಿನನಿತ್ಯದ ಆಹಾರ ಪಾನೀಯಗಳಲ್ಲಿ ಬಳಸುತ್ತಿರುವ ಬೆಲ್ಲ, ಸಕ್ಕರೆಗಳ ತಯಾರಿಕೆಗೆ ಪ್ರತ್ಯೇಕವಾದ ಶೆಡ್ಡುಗಳಿದ್ದವು.[೧೯] ಇವುಗಳ ಮೇಲೆ ತೆರಿಗೆಯನ್ನು ವಿಧಿಸಲಾಗಿತ್ತು. ರೈತನು ಕಬ್ಬನ್ನು ಹುಲುಸಾಗಿ ಬೆಳೆಸಿ ಅದನ್ನು ಬೆಲ್ಲ ಮತ್ತು ಸಕ್ಕರೆ ಮಾಡಲು ಅದಕ್ಕೆ ಸಂಸ್ಕಾರ ಕೊಡಲು ಪ್ರಯತ್ನಿಸುತ್ತಿದ್ದನು. ಪೂವಿನಬಾಗೆಯ ಪ್ರದೇಶದಲ್ಲಿ ಕಲ್ಯಾಣಿ ಚಾಲುಕ್ಯ ಮತ್ತು ರಟ್ಟರ ಕಾಲದಲ್ಲಿ ಬೆಲ್ಲ ಅಥವಾ ಸಕ್ಕರೆಯನ್ನು ತಯಾರಿಸುತ್ತಿದ್ದರೆಂದು ಶಾಸನ ಹಾಗೂ ಗ್ರಂಥಗಳಿಂದ ತಿಳಿದುಬರುತ್ತದೆ. ಬೆಳಗಾವಿ ಜಿಲ್ಲೆಯು ಸಕ್ಕರೆ ಕಾರ್ಖಾನೆಗಳಿಗೆ ರಾಷ್ಟ್ರಮಟ್ಟದಲ್ಲಿಯೇ ಹೆಸರುವಾಸಿಯಾಗಿದೆ. ವೇಣುಗ್ರಾಮಕ್ಕೆ (ಬೆಳಗಾವಿ) ಹಳ್ಳಿಗಳಿಂದ ಎತ್ತಿನ ಬಂಡೆಗಳ ಮುಖಾಂತರ ಬೆಲ್ಲಗಳನ್ನು ಪೂರೈಸುತ್ತಿದ್ದರು. 'ಬೆಲ್ಲದ ಬೆಂಡೆ' ಎಂದು ಶಾಸನದಲ್ಲಿ ಬರುತ್ತದೆ.[೨೦] ರಟ್ಟರ ಆಸ್ಥಾನ ಕವಿ ಪಾರ್ಶ್ವನಾಥ ತನ್ನ ಒಂದು ಗ್ರಂಥದಲ್ಲಿ 'ತುಪ್ಪಮ್ಂ ಸಕ್ಕರೆಯಂ' ಯೆಂದು ಬಳಸಿದ್ದಾನೆ. ಇದರಿಂದ ಪ್ರಾಚೀನ ಕಾಲದಲ್ಲಿ ಸಕ್ಕರೆ ಈ ಪ್ರದೇಶದಲ್ಲಿದ್ದು ನಮಗೆ ಮನವರಿಕೆಯಾಗುತ್ತದೆ.[೨೧]

**ವರ್ತಕರು ಮತ್ತು ವರ್ತಕರ ಪ್ರಕಾರಗಳು :**

ಮಾನವನ ಜನಾಂಗದ ಆರ್ಥಿಕ ಬದುಕನ್ನು ರೂಪಿಸುವ ಹಲವಾರು ಅಂಶಗಳಲ್ಲಿ ವರ್ತಕರು ಮತ್ತು ವರ್ತಕ ಸಂಘಗಳು ಪ್ರಮುಖ ಪಾತ್ರವನ್ನು ವಹಿಸುತ್ತೇವೆ. ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡಿರುವ

---

೧೮. ಡಾ. ಸೂರ್ಯನಾಥ ಕಾಮತ : ಬೆಳಗಾವಿಯ ಜಿಲ್ಲಾ ಗೆಜೆಟಿಯರ್, ಬೆಂಗಳೂರು, ೧೯೭೩, ಪು. ೯೯.

೧೯. ಕುಪ್ಪುಸ್ವಾಮಿ, ಜಿ.ಆರ್. : Economic Condition in Karnataka, Dharwad, 1975, p. 106.

೨೦. ಎಫಿಗ್ರಾಫಿಯಾ ಇಂಡಿಕಾ, ಸಂಪುಟ-೧೩, ಬೆಳಗಾಂವ, ಕ್ರಿ.ಶ. ೧೨೦೪-೦೫, ಪು. ೧೮.

೨೧. ಪಾರ್ಶ್ವನಾಥ ಪುರಾಣ, ಪು. ೮೫೩.

ವರ್ತಕರು ಕರ್ನಾಟಕದಲ್ಲಿ ಇವರ ಉಲ್ಲೇಖ ಕ್ರಿ.ಶ. ೧ನೇ ಶತಮಾನದಿಂದ ೮ ನೇ ಶತಮಾನದಲ್ಲಿ ಕಂಡುಬರುತ್ತದೆ. ಇವರನ್ನು 'ವಿನಿಮಯ ವರ್ತಕ'ರೆಂದು ವಿಂಗಡಿಸಬಹುದು.[೬೨] ಕೇವಲ ವ್ಯಾಪಾರ ವೃತ್ತಿಯನ್ನು ಮಾಡುವವರೇ ವಿನಿಮಯ ವರ್ತಕರು ಅವರಲ್ಲಿ ಬಣಂಜಿಗ, ಶೆಟ್ಟಿಗುತ್ತ, ನಕರ, ಮುಮ್ಮುರಿದಂಡ, ಅವಳಿಘಾತ್ತಗ, ನಾನಾದೇಶಿ, ಉಭಯನಾನಾದೇಶಿ ಮೊದಲಾದವರು ಸೇರ್ಪಡೆಯಾಗುತ್ತಾರೆ.[೬೩]

ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಆರ್ಥಿಕವೆಂದರೆ ಕೃಷಿ, ಪಶುಪಾಲನೆ, ವಾಣಿಜ್ಯ, ಕೈಗಾರಿಕೆ, ರಾಜನೀತಿ ಹಾಗೂ ದಂಡನೀತಿ ಎಂದು ಹೇಳಿದ್ದಾನೆ.[೬೪] ಚಾಲುಕ್ಯ ರಟ್ಟರಸರ ಕಾಲದಲ್ಲಿ ಕೂಹೂಂಡಿ ಮೂಸಾಸಿರ ನಾಡು ಪ್ರಕೃತಿ ಸಂಪತ್ತಿನಿಂದ ಕೂಡಿತ್ತು. ಕೆರೆ, ಸರೋವರ, ಜಲಪಾತ, ಸಮೃದ್ಧವಾದ ಭತ್ತದ ಗದ್ದೆಗಳಿಂದ ಕಂಗೊಳಿಸುತ್ತಿತ್ತು.[೬೫] ರಟ್ಟರಸಳನೇಯ ಕಾರ್ತವೀರ್ಯನ ಕಾಲದಲ್ಲಿ ರಾಜ್ಯದಲ್ಲಿ ಪಶ್ಚಿಮ, ದಕ್ಷಿಣ ಹಾಗೂ ಕೇರಳ, ಗುಜರಾತಗಳಿಂದ ಈ ಪ್ರದೇಶಕ್ಕೆ ವ್ಯಾಪಾರಿಗಳು ಬರುತ್ತಿದ್ದರು. ಮುತ್ತು, ರತ್ನ, ಹವಳ, ವಜ್ರ ಮೊದಲಾದ ಬೆಲೆಬಾಳುವ ವೈಢೂರ್ಯಗಳನ್ನು ವ್ಯಾಪಾರ ಮಾಡುತ್ತಿದ್ದರು. ಸಾಂಬಾರ ಪದಾರ್ಥಗಳು, ಗಂಧ, ಧೂಪ, ಕರ್ಪೂರ ಇತ್ಯಾದಿ ವಸ್ತುಗಳನ್ನು ವಿದೇಶಗಳಿಗೆ ಕಳುಹಿಸುತ್ತಿದ್ದರು. ವಿದೇಶಗಳಿಂದಲೂ ಅನೇಕ ಜೀವನಾವಶ್ಯಕ ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು.[೬೬]

**ನಾಣ್ಯಗಳು :**

ವ್ಯವಹಾರ ಅತಿ ರಭಸದಿಂದ ಸಾಗಲು ಹಾಗೂ ಅಧಿಕಾರಾಭಿವೃದ್ಧಿ ಸಾಧಿಸುವಲ್ಲಿ ಹಣದ ಪಾತ್ರ ಪ್ರಮುಖವಾದದ್ದು. ಪ್ರಾಚೀನ ಕಾಲದ ಸಿಂಧೂ ನದಿ ಸಂಸ್ಕೃತಿಯಿಂದಲೇ ನಾಣ್ಯಗಳ ಬಳಕೆ ನಮಗೆ ಕಂಡುಬರುತ್ತದೆ. ಸಾಮಾನ್ಯವಾಗಿ ನಾಣ್ಯಗಳನ್ನು ತಯಾರಿಸುತ್ತಿದ್ದ ಸ್ಥಳಗಳನ್ನು ಕಮ್ಮಟಗಳೆಂದು ಅಚ್ಚಿನ ಟಂಕಸಾಲೆಗಳೆಂದು ಕರೆಯುತ್ತಿದ್ದರು. ವಿಶ್ವಕರ್ಮರೆಂದು ಕರೆಯಿಸಿಕೊಳ್ಳುವ ಅಕ್ಕಸಾಲಿಗರನ್ನು ರಾಜನು ಕಮ್ಮಟಗಳಲ್ಲಿ ನೇಮಿಸಿಕೊಳ್ಳುತ್ತಿದ್ದರು.[೬೭]

---

೬೨. ಡಾ.ಬಿ.ಆರ್.ಹಿರೇಮಠ (ಸಂ.) : ಶಾಸನ ಸಂಪದ, ಶಾಸನಗಳಲ್ಲಿ ಕರ್ನಾಟಕ ವರ್ತಕರು, ಧಾರವಾಡ - ೧೯೮೯, ಪು. ೧೮.
೬೩. ಡಾ. ಎಸ್.ಕೆ.ಕೊಪ್ಪಾ : ತರ್ದವಾಡಿ ನಾಡು : ಒಂದು ಅಧ್ಯಯನ, ಇಂಡಿ, ೧೯೯೦, ಪು. ೨೧೩.
೬೪. ಹುಲ್ಜ (ಸಂ.) : ಎಫಿಗ್ರಾಫಿಯಾ ಇಂಡಿಕಾ, ಸಂಪುಟ-೭, ಕಲ್ಕತ್ತಾ, ೧೯೮೧, ಪು. ೧೧೮.
೬೫. ಅದೇ, ಪು. ೧೮.
೬೬. ಅದೇ.
೬೭. ಡಾ. ಬಿ.ಆರ್. ಹಿರೇಮಠ : ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಧಾರವಾಡ, ೧೯೭೯, ಪು. ೩೩೨.

**ಗದ್ಯಾಣ :**

ಇದು ಹೆಚ್ಚು ಪ್ರಕಾರದಲ್ಲಿದ್ದ ಹಾಗೂ ಚಲಾವಣೆಯಲ್ಲಿದ್ದ ನಾಣ್ಯ. ಇದು ಬಂಗಾರದ ನಾಣ್ಯವಾಗಿದ್ದು ೬೧.೭೫ ರಿಂದ ೬೩ ಗ್ರೇನ್ ತೂಕದ್ದಾಗಿರುತ್ತದೆಂದು ಅಪ್ಪಾದೊರೈಯವರು ಅಭಿಪ್ರಾಯ.[೭೮]

**ಪಣ :**

ಪಣವನ್ನು 'ಹಣ' ಎಂದು ಕರೆಯುತ್ತಿದ್ದರು. ಇದು ಬಂಗಾರ, ಬೆಳ್ಳಿ ಮತ್ತು ತಾಮ್ರಗಳಲ್ಲಿ ತಯಾರಿಸುತ್ತಿದ್ದರು. ಬಂಗಾರದ ನಾಣ್ಯವು ೫.೨೮ ಗ್ರೇನ್ ತೂಕದ್ದಾಗಿತ್ತು.[೭೯]

**ಸುವರ್ಣ :**

ಇದು ಗದ್ಯಾಣದಷ್ಟೇ ತೂಕ ಮತ್ತು ಮೌಲ್ಯವನ್ನು ಹೊಂದಿತ್ತು. ಆದರೆ ಈ ನಾಣ್ಯದ ಉಲ್ಲೇಖ ಹೆಚ್ಚು ಕಂಡುಬರುವುದಿಲ್ಲ. ಹೀಗೆ ಅದು ಬಳಕೆಯಲ್ಲಿದ್ದ ನಾಣ್ಯಗಳ ಸಂಬಂಧದ ಮೌಲ್ಯವನ್ನು ಕೊಡಬಹುದು.[೮೦]

**ತೂಕ ಮತ್ತು ಅಳತೆಗಳು :**

ಬೆಳ್ಳಿ, ಬಂಗಾರ, ಮುತ್ತು-ರತ್ನಗಳಂತಹ ಬೆಲೆಬಾಳುವ ವಸ್ತುಗಳು ತೂಕದಿಂದ ಮಾರಲ್ಪಟ್ಟುತ್ತಿದ್ದವು.[೮೧] ಭೂಮಿಯನ್ನು ಮುಖ್ಯವಾಗಿ ೨ ಅಳತೆಗೋಲುಗಳಿಂದ ಅಳೆಯುತ್ತಿದ್ದವು. ಅವರಲ್ಲಿ ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ ಉದಾಹರಣೆ ೨ ಸಲಗೆ (ಎಕರೆ) ಗದ್ಯವೆಂದರೆ ೨ ಸಲಗೆಯಷ್ಟು ಬೀಜವನ್ನು ಬಿತ್ತಬಹುದಾದ ಗದ್ಯ ಎಂದರ್ಥ. ಇನ್ನೊಂದು ಅಳತೆಗೋಲುಗಳ ಸಹಾಯದಿಂದ ಅಳೆಯುತ್ತಿದ್ದ ವಿಧಾನ ದೇಶದ ಆಯಾ ಭಾಗಗಳಿಗೆ ಆಯಾ ಊರುಗಳಗೆ ರಾಜನು ಅಳತೆಗೋಲುಗಳನ್ನು ನಿರ್ಧರಿಸುತ್ತಿದ್ದನು.[೮೨]

**ತೆರಿಗೆ ಪದ್ಧತಿ :**

ಸಾಮಾನ್ಯವಾಗಿ ಆಸ್ತಿ ತೆರಿಗೆ, ವೃತ್ತಿ ತೆರಿಗೆ, ವ್ಯಾಪಾರ ತೆರಿಗೆ, ಕೈಗಾರಿಕಾ ತೆರಿಗೆ, ಸಾಮಾಜಿಕ, ಧಾರ್ಮಿಕ ತೆರಿಗೆ ಹೀಗೆ ಇತ್ಯಾದಿಯೆಂದು ವಿಂಗಡಿಸಬಹುದು. ವ್ಯಕ್ತಿಗಳು ನಿರ್ವಹಿಸುತ್ತಿದ್ದ ವೃತ್ತಿಗಳ ಮೇಲಿನ

---

೭೮. ಡಾ. ಬಿ. ಆರ್. ಹಿರೇಮಠ : ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಧಾರವಾಡ, ೧೯೭೯, ಪು. ೧೪೪.
೭೯. ಅದೇ, ಪು. ೧೪೫.
೮೦. ಅದೇ ಪು. ೧೪೫.
೮೧. ಎಮ್. ಮರಿಯಪ್ಪ ಭಟ್ : ವ್ಯವಹಾರ ಗಣಿತ, ಬೆಂಗಳೂರು, ೧೯೮೦, ಪು. ೩.
೮೨. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೩೪.

ತೆರಿಗೆಯನ್ನು ವಿಧಿಸುತ್ತಿದ್ದರು. ಅದರಲ್ಲಿ ಪ್ರಮುಖವಾಗಿ ಸಾರ್ವಜನಿಕರ ಬಟ್ಟೆಯನ್ನು ತೊಳೆದುಕೊಡುವ ಅಗಸರು ಮೊದಲಿಗರಾಗಿದ್ದರು.[೮೩] ಅದರಂತೆ ಅಂಗಡಿಗಳ ಮೇಲೂ ತೆರಿಗೆ ವಿಧಿಸುತ್ತಿದ್ದರೆಂದು ಕ್ರಿ.ಶ. ೧೨೦೪ ರ ಬೆಳಗಾವಿ ಶಾಸನದಲ್ಲಿ ''ಭತ್ತವರಸದಂಗಡಿಗೆ ಭತ್ತ ನಿಚ್ಚನೊಲ್ಲಿಗೆ'' ಎಂದು ಹೇಳುವುದರ ಜೊತೆಗೆ ಎತ್ತು ಕೋಣಗಳಿಗೂ ತೆರಿಗೆಯನ್ನು ಇದೇ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ.[೮೪]

ಕಲ್ಯಾಣ ಚಾಲುಕ್ಯ ಮತ್ತು ರಟ್ಟರ ಕಾಲದಲ್ಲಿ ವಾಣಿಜ್ಯ ತೆರಿಗೆಯ ಬಗ್ಗೆ ನಾವು ತಿಳಿದುಕೊಳ್ಳಬಹುದು. ಈ ವಾಣಿಜ್ಯದ ಬಗ್ಗೆ ಬೆಳಗಾಂವ್ ಶಾಸನದಲ್ಲಿ ಉಲ್ಲೇಖ ಬರುತ್ತದೆ.[೮೫] ಗೃಹ ಮತ್ತು ಸಣ್ಣ ಕೈಗಾರಿಕೆಗಳಾದ ಶೇಂಗಾ, ಎಳ್ಳು, ಸೂರ್ಯಕಾಂತಿ ಹಾಗೂ ಔಡಲುಇತ್ಯಾದಿ ಖಾದ್ಯ ಪದಾರ್ಥಗಳಿಂದ ಎಣ್ಣೆಯನ್ನು ತೆಗೆಯುತ್ತಿದ್ದರು. ಅವುಗಳ ಮೇಲೆ ತೆರಿಗೆಗಳನ್ನು ವಿಧಿಸುತ್ತಿದ್ದರೆಂದು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ 'ಎಕ್ಸಂಬಿಯ' ಕ್ರಿ.ಶ. ೧೯೮೫ ರ ಶಾಸನವೊಂದರಲ್ಲಿ 'ಗಾಣದೊಕ್ಕಾಲುದೆರೆ'[೮೬] ಎಂದುಉಲ್ಲೇಖ ಬರುವುದು. ಎಕ್ಸಂಬಿಯ ಶಾಸನದಲ್ಲಿ 'ಚೀರವಣಮುಂ'[೮೭] ಎಂದು ಬಂದಿದೆ.

**ಇತರೆ ತೆರಿಗೆ :**

ರಾಜ್ಯದ ಬೊಕ್ಕಸಕ್ಕೆ ಹಣದ ಕೊರತೆ ಬಿದ್ದಾಗ ರಾಜನು ಶ್ರೀಮಂತ ವರ್ಗದವರ ಆಸ್ತಿಪಾಸ್ತಿಗೆ ಕೈಹಾಕಿ ತನ್ನ ರಾಜ್ಯ ಭೊಕ್ಕಸವನ್ನು ಭರಿಸಿಕೊಳ್ಳುತ್ತಿದ್ದನು. ಮಕ್ಕಳಿಲ್ಲದವರ, ವಾರಸುದಾರರಿಲ್ಲದವರ ಆಸ್ತಿಯನ್ನು ಸ್ವೀಕರಿಸುತ್ತಿದ್ದನೆಂದು ಬೆಳಗಾವಿ ಜಿಲ್ಲೆಯ ಕ್ರಿ.ಶ. ೧೨೦೦ ರ ಸಂಕೇಶ್ವರ ಶಾಸನದಿಂದ ತಿಳಿದು ಬರುವುದು.[೮೮]

**ಸಾರಿಗೆ, ಸಾಕಾಣಿಕೆ ಸೌಕರ್ಯ :**

ರೈತರು ತಮ್ಮ ಹೊಲಗಳಲ್ಲಿ ಬೆಳೆದ ಫಸಲನ್ನು ಮನೆಗೆ ಒಯ್ಯಲು ಹಾಗೂ ಪೇಟೆಗೆ ಕೊಂಡೊಯ್ಯಲು ಬಂಡಿಗಳಿಗೆ ಎತ್ತು, ಕೋಣಗಳನ್ನು ಬಳಸುತ್ತಿದ್ದರು. ಅದರಂತೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವ್ಯಾಪಾರಸ್ಥರು ತಮ್ಮ ವಸ್ತುಗಳನ್ನು ಒಯ್ಯಬೇಕಾದರೆ ಎತ್ತು, ಕೋಣ, ಕುದುರೆ, ಕತ್ತೆಗಳ ಬೆನ್ನಿನ ಮೇಲೆ

---

೮೩. Gururajacharya : Economic and Social Life in Karnataka, Mysore, 1974, p. 156.

೮೪. ಎಫಿಗ್ರಾಫಿಯಾ ಇಂಡಿಕಾ, ಸಂಪುಟ೧೩, ಪು. ೧೮.

೮೫. ಎಫಿಗ್ರಾಫಿಯಾ ಇಂಡಿಕಾ, ಸಂಪುಟ೧೩, ಪು. ೧೮.

೮೬. ಡಾ. ಎಮ್.ಎಸ್.ಸುಂಕಾಪುರ (ಸಂ.) : ಕರ್ನಾಟಕ ಭಾರತಿ, ಸಂ.೧೧, ಸಂಚಿಕೆ-೨, ಕ.ವಿ.ವಿ. ಧಾರವಾಡ, ೧೯೭೮, ಪು. ೪೧.

೮೭. ಅದೇ, ಪು. ೪೧.

೮೮. ಪಿ.ಜಿ. ಕುಂದಣಗಾರ (ಸಂ.) : ಇನ್ಸ್ಕ್ರಿಪ್ಷನ್ಸ್ ಇನ್ ನಾರ್ಥರ್ನ ಕರ್ನಾಟಕ ಆ್ಯಂಡ ಕೊಲ್ಲಾಪುರ ಸ್ಟೇಟ್, ಕೊಲ್ಲಾಪುರ, ೧೯೩೦, ಪು. ೪೧.

ಹೇರಿಕೊಂಡು ಸಾಗಿಸುವುದು ರೂಢಿಯಲ್ಲಿತ್ತು. ಉದಾಹರಣೆಗೆ ಕ್ರಿ.ಶ. ೧೧೮೧ ರ ತೇರದಾಳ ಶಾಸನವು ರಟ್ಟರಿಗೆ ಸಂಬಂಧಿಸಿದ್ದು ಇದರಿಂದ ತಿಳಿದುಬರುತ್ತದೆ.[೮೯] ಹಾಗೂ ಬೆಳಗಾವಿ ಜಿಲ್ಲೆಯ ಕಲ್ಲೊಳಿಯ ಶಾಸನ[೯೦] ಎಕ್ಸಂಬಿಯ[೯೧] ಶಾಸನಗಳಲ್ಲಿಯೂ ಎತ್ತು, ಕೋಣ ಪ್ರಸ್ತಾಪವಿರುವುದು ಬೆಲ್ಲದ ಚಕ್ಕಡಿಗೆ ತೆರಿಗೆಯಿದ್ದು ಕ್ರಿ.ಶ. ೧೨೦೪ ರ ಬೆಳಗಾಂವ ಶಾಸನದಲ್ಲಿ ಉಲ್ಲೇಖಗೊಂಡಿದೆ.[೯೨] ಈ ಒಂದು ದಿಸೆಯಲ್ಲಿ ಕುಂತಣಬಾಗೆಯ ಪ್ರದೇಶದಲ್ಲಿ ಅರ್ಥವ್ಯವಸ್ಥೆ ರೂಢಿಯಲ್ಲಿತ್ತು.

**ಸಾಮಾಜಿಕ ಸ್ಥಿತಿಗತಿಗಳು :**



ಒಂದಕ್ಕೊಂದು ಪೂರ್ವಕವಾದ ಸಂಬಂಧವುಳ್ಳ ಜನತೆಯ ಕ್ರಮಬದ್ಧವಾದ ವ್ಯವಸ್ಥಿತ ಸಮೂಹವೇ ಸಮಾಜ. ಸಮಾಜದಲ್ಲಿ ವರ್ಣ, ವರ್ಗ, ಕುಟುಂಬ, ಸಂಘ ಮತ್ತು ಅವುಗಳ ಅಲೋಚನಾ ಕ್ರಮ ಇತ್ಯಾದಿ ಅಂಶಗಳು ಕಂಡುಬರುತ್ತವೆ. ಸಾಮಾಜಿಕ ವ್ಯವಸ್ಥೆಯು ಸಮಾಜದ ಅನೇಕ ಅಂಶಗಳನ್ನು ಒಳಗೊಂಡ ಅಧ್ಯಯನವಾಗಿರುತ್ತದೆ. ಸಮಾಜವೆಂದ ಮೇಲೆ ಅನೇಕ ವರ್ಗಭೇದ ಪ್ರಬೇಧ ಇತ್ಯಾದಿ ಅಂಶಗಳು ಸೇರ್ಪಡೆಯಾಗುವುದು ಅವಶ್ಯಕ. ಸಮಾಜ ವ್ಯವಸ್ಥೆಯ ಮೇಲೆ ರಾಜಕೀಯ ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಬೌದ್ಧಿಕ ಅಂಶಗಳು ಪ್ರಭಾವ ಬೀರುತ್ತವೆ. ಕರ್ನಾಟಕದ ಸಾಮಾಜಿಕ ವ್ಯವಸ್ಥೆಯನ್ನು ಶಾಸನಗಳ ಹಾಗೂ ಇತರ ಐತಿಹಾಸಿಕ ಆಧಾರಗಳಿಂದ ರಚಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಕೂಹೂಂಡಿ ಪ್ರದೇಶವನ್ನು ಆಳಿದ ಅರಸರ ಕಾಲದ ಸಾಮಾಜಿಕ ವ್ಯವಸ್ಥೆಯನ್ನು ಅವಲೋಕಿಸಿದಾಗ ಅಲ್ಲಿನ ಜನಜೀವನದ ನಿಜಕ್ಕೂ ಸುಖಮಯವಾಗಿತ್ತೆಂದು ಸೂಕ್ಷ್ಮವಾಗಿ ತಿಳಿದು ಬರುತ್ತದೆ. ಏಕೆಂದರೆ ಕುಂತನಬಾಗೆಯ ವ್ಯಾಪ್ತಿಯಲ್ಲಿ ಬರುವ ಭೂಮಿಯು ನವಭುಜಗಳಲ್ಲಿಯೂ ಹುಲುಸಾಗಿ ಬೆಳೆಯುತ್ತಿತ್ತು[೯೩] ಎಂದು ರಟ್ಟರಸರ ಶಾಸನದಿಂದ ತಿಳಿದುಬರುತ್ತದೆ.

ದರೋಡೆಕೋರರು, ಕಳ್ಳಕಾಕರು, ಹಾವಳಿ ಇರಲಿಲ್ಲ. ಶ್ರೀಮಂತ ವ್ಯಾಪಾರಿಗಳಿಂದ, ಹೊಸ ವಸ್ತ್ರಗಳಿಂದ, ಹಾಲು ಹೈನುಗಳಿಂದ, ಧಾನ್ಯ ಸಂಪತ್ತಿನಿಂದ ಕೂಹೂಂಡಿನಾಡು ಸಂಪದ್ಭರಿತವಾಗಿತ್ತು. ಇದರಿಂದ ಸಂತೋಷದಿಂದಲೂ, ವಿನೋದದಿಂದಲೂ, ಸಮಯವನ್ನು ಕಳೆಯುತ್ತಿದ್ದರು. ಕವಿ ಕಾಲದ

---

೮೯. ಬಾ.ರಾ.ಗೋಪಾಲ (ಸಂ.) : ಕೆ.ಆಯ್. ಸಂಪುಟ-೫, ಧಾರವಾಡ, ೧೯೬೯, ಪು. ೨೯೬.

೯೦. ಸನ್ಮತಿ ಪತ್ರಿಕೆ, ಜನೆವರಿ, ನಂ. ೭೫, ಪು. ೧೫, ಕಲ್ಲೊಳಿ, ಕ್ರಿ.ಶ. ೧೨೦೫.

೯೧. ಕರ್ನಾಟಕ ಭಾರತಿ ಸಂಪುಟ-೧೧, ಸಂಚಿಕೆ-೨, ಕ್ರಿ.ಶ. ೧೧೬೫.

೯೨. ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೩, ಪು. ೧೮.

೯೩. ಡಾ. ಶಿ.ಬಾ. ಪಾಟೀಲ : ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ (ಪಿಎಚ್.ಡಿ. ಪ್ರಬಂಧ) [illegible] ಪು. ೧೩೦-೧೩೨.

ಕೂಸು ಎಂದ ಮೇಲೆ ರಟ್ಟರ ಆಸ್ಥಾನಕವಿ ನೇಮಿಚಂದ್ರ ತನ್ನ ಲೀಲಾವತಿ ಕಾವ್ಯದಲ್ಲಿ ಹಿಂದಿನ ಕವಿಗಳ ರುದ್ರರಸದ ಭಯದ ಭಯಾನಕತೆ ಇಲ್ಲ. ಮುಂದಿನ ಕವಿಗಳ ಮೇಲೆಯೂ ಗಲಭೆಯ, ಅಜ್ಞಾನಕತೆಯ ಸುಳಿವಿಲ್ಲ. ಶೃಂಗಾರಭರಿತ ಕಾವ್ಯ ಬರೆಯಬೇಕಾದರೆ ಕವಿ ಎಷ್ಟೊಂದು ನೆಮ್ಮದಿಯನ್ನು ಕಂಡಿರಬೇಕು? ಜನಜೀವನದ ತಳಹದಿಯೇ ಆದರ್ಶ ಕುಟುಂಬ. ಇಂತಹ ಆದರ್ಶ ಕುಟುಂಬಗಳಿಂದ ಆದರ್ಶ ಊರು ಆದರ್ಶ ಊರುಗಳಿಂದ, ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಅರಸು ಮನೆತನಗಳ ಸಾಮ್ರಾಜ್ಯವು ಸತ್‌ಪ್ರಜೆಗಳ ನೆಲೆಬೀಡಾಗಿತ್ತೆಂದು ಬಣ್ಣಿಸಿದ್ದಾನೆ.[೯೪]

ಸಮಾಜದಲ್ಲಿ ನೀತಿವಂತರಿಗೆ ವಿಶೇಷ ಸ್ಥಾನವಿತ್ತು. ಅನೀತಿವಂತರನ್ನು ಉಗ್ರವಾಗಿ ದಂಡಿಸುತ್ತಿದ್ದರು. ಅವರು ಸಾರ್ವಜನಿಕರ ಎದುರಿನಲ್ಲಿಯೇ ಶಿಕ್ಷೆ ಅನುಭವಿಸಬೇಕಾಯಿತು. ಉದಾಹರಣೆಗೆ ಕ್ರಿ.ಶ. ೧೨೦೪ ರ ಬೆಳಗಾಂವ ಶಾಸನದಲ್ಲಿ ರಟ್ಟರ ದೊರೆ ಲಕ್ಷ್ಮೀದೇವನ ರಾಣಿಯೇ 'ಘಟಸರ್ಪವಿಜಯ' ಮಾಡಿ ಶಿಕ್ಷೆ ಅನುಭವಿಸಬೇಕಾಯಿತು.[೯೫] ಈ ಒಂದು ಕಾರಣದಿಂದ ಅಪರಾಧ ಮಾಡುವುದಕ್ಕೆ ಜನ ಹೆದರುತ್ತಿದ್ದರು. ಜನಸಾಮಾನ್ಯರಿಗೆ ಮುಕ್ತವಾದ ನ್ಯಾಯ ದೊರಕುತ್ತಿತ್ತು. ಒಟ್ಟಿನಲ್ಲಿ ಸಮಾಜದಲ್ಲಿ ನೈತಿಕತೆ ನೆಲೆಯೂರಿತ್ತು.

**ಜಾತಿಪದ್ಧತಿ :**

ಸಾಮಾನ್ಯಕ್ಕೆ ಚಾತುವರ್ಣವ್ಯವಸ್ಥೆ ರೂಢಿಯಲ್ಲಿತ್ತು. ಪ್ರಾಚೀನ ವರ್ಣಪದ್ಧತಿ ಸೃಷ್ಟಿಯಾಗುವ ಪೂರ್ವದಲ್ಲಿ ಸಮಾಜವನ್ನು ವೃತ್ತಿಗನುಗುಣವಾಗಿ ವರ್ಗೀಕರಣ ಮಾಡಲಾಗಿತ್ತು.[೯೬] ವೃತ್ತಿಗಳು ಪ್ರಾಚೀನ ಕಾಲದಲ್ಲಿಯೇ ಜಾತಿಗಳಾಗಿ ರೂಪುಗೊಂಡಿದ್ದವು ಎಂಬುದರ ಬಗ್ಗೆ ಒಪ್ಪಿಗೆಯಿಲ್ಲ. ಅಲ್ಲದೇ ಈ ವೃತ್ತಿಗಳು ವಂಶಪರಂಪರೆಯಾಗಿದ್ದವು ಎಂದು ಹೇಳಲು ಆಧಾರಗಳು ಸ್ಪಷ್ಟವಾಗಿ ಲಭ್ಯವಾಗಿಲ್ಲ.[೯೭] ವೇದಗಳಲ್ಲಿ ಅತ್ಯಂತ ಪ್ರಾಚೀನವಾದ ಋಗ್ವೇದದಲ್ಲಿ ವರ್ಣಭೇದದ ಕುರುಹುಗಳೇ ಇಲ್ಲ. ವರ್ಣ ಎಂಬ ಶಬ್ದವು ಜಾತಿಸೂಚಕವಾಗಿರದೇ ಅದು ಆರ್ಯ ಹಾಗೂ ದ್ರಾವಿಡರ ನಡುವಿನ ವ್ಯತ್ಯಾಸಗಳನ್ನು ಸೂಚಿಸುವ ಪದವಾಗಿದೆ. ಅನೇಕ ಸಲ ಅಂತರಜಾತಿಯ ವಿವಾಹಗಳು ನಡೆಯುತ್ತಿದ್ದ ಉಲ್ಲೇಖಗಳು ಕಂಡುಬರುತ್ತವೆ. ಭಾರತದಲ್ಲಿ ಜಾತಿವ್ಯವಸ್ಥೆಯ ಮೂಲ ಪ್ರಾಚೀನವಾದುದು. ಮನುವರ್ಣಸಂಕರದಿಂದ ಬೇರೆ ಬೇರೆ ಜಾತಿಗಳು

---

೯೪. ಡಾ. ಶಿ.ಬಾ. ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ (ಪಿಎಚ್.ಡಿ. ಪ್ರಬಂಧ) ಪು. ೧೩೨.
೯೫. ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೩, ಪು. ೧೮.
೯೬. ಎ.ಎಸ್. ಅಲ್ಟೇಕರ್ : ವೇದಕಾಲದ ಸಮಾಜಯುಗಯಾತ್ರೆ, ಧರ್ಮ, ಭಾರತೀಯ ಸಂಸ್ಕೃತಿ, ಸಂಪುಟ-೧, ಪು. ೧೬೯.
೯೭. ಡಾ. ಎಸ್.ಕೆ. ಕೊಪ್ಪಾ : ತರ್ದವಾಡಿ ನಾಡು : ಒಂದು ಅಧ್ಯಯನ, ಇಂಡಿ, ೧೯೯೦, ಪು. ೧೫೨.

ಹುಟ್ಟಿದವೆಂದು ಅಭಿಪ್ರಾಯಪಡುತ್ತಾನೆ.[೯೮] ಕೊನೆಗೆ ಸಮಾಜದಲ್ಲಿ ಮೇಲು-ಕೀಳು ಜಾತಿಯರೆಂಬ ಮನುಭಾವನೆಯುಂಟಾಗಿ ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ಇದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಗಗಳು ಉದಯಿಸಿದವು.

**ಮಹಿಳೆಯರ ಸ್ಥಾನಮಾನ :**

ಮಹಿಳೆಯರ ಸ್ಥಾನಮಾನ ಚರ್ಚೆಯ ವಿಷಯವನ್ನಾಗಿ ಪ್ರಸ್ತುತಪಡಿಸಿದ್ದರೆ ಹೊರತು ಪುರುಷರ ಸ್ಥಾನಮಾನವಲ್ಲ. ಹಲವಾರು ಶಾಸನಗಳು ಮಹಿಳೆಯರ ಸ್ಥಾನಮಾನಗಳ ಬಗ್ಗೆ ವಿವರವಾದ ಮಾಹಿತಿಯನ್ನು ಒದಗಿಸುತ್ತವೆ. ರಾಜಮನೆತನದ ಸ್ತ್ರೀಯರು ಧಾರ್ಮಿಕ ಮತಗಳಿಗೆ ಪ್ರೋತ್ಸಾಹವನ್ನು ಕೊಡುತ್ತಿದ್ದರು. ಉದಾ : ಕ್ರಿ.ಶ. ೧೦೪೪ ಹೂಲಿ ಶಾಸನವು ೧ನೇ ಸೋಮೇಶ್ವರನಿಗೆ ಸೇರಿದ್ದು. ಕೂಹೂಂಡಿ-೩೦೦೦ ಪ್ರಾಂತಾಧಿಕಾರಿಯ ಹೆಂಡತಿ ಲಚ್ಚಿಯಬ್ಬರಸಿಯು ಹೂಲಿ ಗ್ರಾಮದಲ್ಲಿ ಒಂದು ಬಸದಿಯನ್ನು ನಿರ್ಮಿಸಿ ಅದರ ಜೀರ್ಣೋದ್ಧಾರಕ್ಕೆ ಹಣ ಮತ್ತು ಭೂಮಿಯನ್ನು ದಾನವನ್ನಾಗಿ ನೀಡಿದಳೆಂದು ಉಲ್ಲೇಖಿಸಲ್ಪಟ್ಟಿದೆ.[೯೯]

ರಾಯಬಾಗದ ಮಧ್ಯಭಾಗದಲ್ಲಿ ಚಾಲುಕ್ಯ ಶೈಲಿಯಲ್ಲಿ ನಿರ್ಮಾಣಗೊಂಡ ಒಂದು ಬಸದಿಯ ಮುಖಮಂಟಪ ಬಳಿಯಿರುವ ರಟ್ಟರಸ ೪ನೇ ಕಾರ್ತವೀರ್ಯನ ಕ್ರಿ.ಶ. ೧೦೪೧ ರ ಶಾಸನವು ಆತನ ರಾಣಿಯಿಂದ ರಚಿತವಾಗಿದೆ ಎಂದು ತಿಳಿದುಬರುತ್ತದೆ.[೧೦೦] ಈ ಒಂದು ನಿಟ್ಟಿನಲ್ಲಿ ಬಾಗೆ ಪ್ರದೇಶದಲ್ಲಿ ಸ್ತ್ರೀಯರ ಸ್ಥಾನಮಾನ ಬಹು ಉಚ್ಚಮಟ್ಟದ್ದಾಗಿತ್ತೆಂದು ತಿಳಿದುಬರುತ್ತದೆ.

**ವಿವಾಹ :**

ಹಿಂದೂಗಳಲ್ಲಿ ವಿವಾಹವು ಇಂದಿಗೂ ಅತ್ಯಂತ ಮುಖ್ಯವಾದ ಸಾಮಾಜಿಕ ಕಾರ್ಯವಾಗಿದೆ. ಇದರಲ್ಲಿ ವಿಸ್ತಾರವಾದ ವಿಧಿಗಳು ಆಚರಣೆಯಲ್ಲಿದ್ದವು. ಸಾಮಾನ್ಯವಾಗಿ ಸವರ್ಣೆಯರಲ್ಲಿ ಕೊಡು-ಕೊಳ್ಳುವಿಕೆ ಸಹಜವಾಗಿತ್ತೆಂದು ತಿಳಿದುಬರುತ್ತದೆ. ರಾಜನು ತನಗೆ ಇಷ್ಟವಾದ ಜಾತಿಯ ಸ್ತ್ರೀಯರೊಡನೆ ವಿವಾಹವಾಗುವುದರ ಬಗ್ಗೆ ಹಲವಾರು ಮಾಹಿತಿಗಳಿವೆ. ವಿವಾಹ ಸಂಬಂಧಕ್ಕೆ ಪ್ರಾಚೀನ ಕಾಲದಿಂದಲೂ ಅತ್ಯಂತ ಗೌರವವಿದೆ. ಮುಖ್ಯವಾಗಿ ನಮ್ಮ ಅಧ್ಯಯನಕ್ಕೆ ಸಂಬಂಧಪಟ್ಟ ಕುಂತನಬಾಗೆಯ ವ್ಯಾಪ್ತಿಯಲ್ಲಿ

---

೯೮. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೩೧.

೯೯. ಎಫಿಗ್ರಾಫಿಯಾ ಇಂಡಿಕಾ, ಸಂಪುಟ-೧೮, ಪು. ೧೨೨.

೧೦೦. ಹೊಂಬೆಳಕು ಸ್ಮರಣಸಂಚಿಕೆ, ಪು. ೧೭-೧೮.

ವೈವಾಹಿಕ ಸಂಬಂಧವು ಸಮಾನ ಅಂತಸ್ತಿನವರೊಡನೆ ಜರುಗುತ್ತಿತ್ತು. ಹಿಂದಿನ ಕಾಲದ ಸಮಾಜದಲ್ಲಿ ಬಹುಪತ್ನಿತ್ವ ಜಾರಿಯಲ್ಲಿತ್ತು. ಆ ಕಾಲಕ್ಕೆ ರಾಜವರ್ಗದಿಂದಲೇ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುವುದುಂಟು. ಕಲ್ಯಾಣ ಚಾಲುಕ್ಯ ದೊರೆ ೧ನೇ ಸೋಮೇಶ್ವರನಿಗೆ ೮ ಜನ ಹೆಂಡತಿಯರಿರುವ ವಿಚಾರ ತಿಳಿದುಬರುತ್ತದೆ. ಆದರೆ ರಟ್ಟರ ಕಾಲದ ಕ್ರಿ.ಶ. ೧೧೪೧ ರ ನೇಸರಗಿಯ ಶಾಸನವು ತನ್ನ ಪತ್ನಿಯರನ್ನು ಹೊರತುಪಡಿಸಿ ಉಳಿದ ಹೆಣ್ಣುಮಕ್ಕಳು ಕೂಡ 'ಪರನಾರಿ ಸಹೋದರ ಭಾವನೆ' ಯಂತೆ ನೋಡಿಕೊಳ್ಳುತ್ತಿದ್ದರು.[೧೦೧] ರಾಜನೇ ನೀತಿವಂತನಾದ ಮೇಲೆ ಪ್ರಜೆಗಳಿಗೆ ಅನೀತಿಯಿಂದ ನಡೆಯಲು ಆಸ್ವಾದವಿರಲಿಲ್ಲ. ಕಾವ್ಯಗಳು ತಮ್ಮ ಕಾಲದ ಸಮಾಜದ ಯಥಾವತ್ತಾದ ಚಿತ್ರಣವನ್ನು ಕೊಡದಿದ್ದರೂ ಸಮಾಜದ ಆಶೋತ್ತರಗಳನ್ನು, ಆದರ್ಶಗಳನ್ನು, ಕುಂದುಕೊರತೆಗಳನ್ನು ಸೂಚಿಸುತ್ತವೆ. ಇಂಥವುಗಳಲ್ಲಿ ಸಮಾಜದ ಪ್ರತಿಬಿಂಬ ಗೋಚರವಾಗುತ್ತದೆ.

ರಟ್ಟರ ಆಸ್ಥಾನ ಕವಿ ನೇಮಿಚಂದ್ರನು ತನ್ನ 'ಲೀಲಾವತಿ' ಕಾವ್ಯದಲ್ಲಿ ಪವಿತ್ರ ಸ್ತ್ರೀ ತನ್ನ ಪತಿಯನ್ನು ಅವಳ ಪ್ರಾಣಕ್ಕಿಂತ ಹೆಚ್ಚು ಪ್ರೀತಿಸುವವಳು ಗಂಡನಿಲ್ಲದೇ ಜೀವಿಸಲು ಇಚ್ಛೆ ಪಡೆಯದೇ ಅಸುನೀಗಲು ಸಿದ್ಧವಾಗುತ್ತಾಳೆ. ಅದೇ ನಿಟ್ಟಿನಲ್ಲಿ ರಟ್ಟರಸರು ಕಂದಣರ್ಪಣಂ ಏಕಪತ್ನಿ ವ್ರತಸ್ಥನಾಗಿ ಆದರ್ಶ ಮೆರೆದಿದ್ದಾನೆ.[೧೦೨] ಹೀನ ಕುಲದವರು ನೀತಿವಂತರಿದ್ದಾರೆ. ಅವರಿಗೆ ಮರ್ಯಾದೆ, ಗೌರವ ಇತ್ತು. ನೀಚ ವರ್ಗದವರಿಗೆಂದು ಭಾವಿಸಿಕೊಡುವರು. ಅರಿವಿನ ಬೆಳಕನ್ನು ಹೊಂದುವುದುಂಟು. ತಲೆ ಬುರಡೆಯಲ್ಲಿ ಹೆಂಡ ಹಾಕಿ ನಾಯಿ ಮಾಂಸ ಬೀಸಿ ತಿನ್ನುವವರು ನೀಚರಲ್ಲ. ದೇವಾಲಯಗಳಿಗೆ ಸಾರ್ವಜನಿಕರಿಗೆ ಬಿಟ್ಟ ದಾನ-ದತ್ತಿಗಳನ್ನು ಅಪಹರಿಸುವವರನ್ನು ನೀಚರೆಂದು ಕ್ರಿ.ಶ. ೯೮೦ ರ ಸೊಗಲ ಶಾಸನದಿಂದ ತಿಳಿದುಬರುತ್ತದೆ.[೧೦೩] ಕರ್ನಾಟಕಕ್ಕೆ ಭೆಟ್ಟಿ ನೀಡಿದ ಅಲ್ಬೆರೂನಿಯ ವರದಿಯ ಪ್ರಕಾರ ಈ ಪ್ರದೇಶದಲ್ಲಿ ಬಾಲ್ಯವಿವಾಹವು ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ.[೧೦೪] ಹೀಗೆ ಕುಂತನಬಾಗೆಯ ಸಾಮಾಜಿಕ ವ್ಯವಸ್ಥೆಯನ್ನು ಹೆಣೆಯಬಹುದಾಗಿದೆ.

---

೧೦೧. ಜೆ.ಬಿ.ಬಿ.ಆರ್.ಎಸ್. ಸಂ.೧೦, ನೇಸರಗಿ, ಕ್ರಿ.ಶ. ೧೧೪೧, ಪು. ೨೪೬.

೧೦೨. ಡಾ. ಶಿ.ಬಾ. ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ(ಪಿಎಚ್.ಡಿ. ಪ್ರಬಂಧ) [illegible] ಪು. ೧೩೨.

೧೦೩. ಎಫಿಗ್ರಾಫಿಯಾ ಇಂಡಿಕಾ, ಸಂಪುಟ-೧೬, ಕ್ರಿ.ಶ. ೯೮೦, ಕಲ್ಕತ್ತಾ, ಪು. ೩.)

೧೦೪. ಡಾ. ಚೆನ್ನಕ್ಕ ಪಾವಟೆ: ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಧಾರವಾಡ, ೧೯೮೭, ಪು. ೫.

**ಧಾರ್ಮಿಕ ಸ್ಥಿತಿಗತಿ :**

ಕರ್ನಾಟಕದ ಧಾರ್ಮಿಕ ಇತಿಹಾಸವು ಅದರ ರಾಜಕೀಯ ಚರಿತ್ರೆಯಷ್ಟೇ ವೈವಿಧ್ಯ ಹಾಗೂ ವೈಶಿಷ್ಟ್ಯಪೂರ್ಣವಾಗ್ಗಿದೆ. ಅದರ ಒಂದು ಅಮೋಘ ಲಕ್ಷಣವೆಂದರೆ ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದ ಮತ ಪಂಥಗಳಷ್ಟೇ ಅಲ್ಲದೆ ಭಾರತ ಹಾಗೂ ವಿಶ್ವದ ಎಲ್ಲ ಧರ್ಮಗಳಿಗೂ ಕ್ರಿ.ಶ. ದಿಂದ ಕಳೆದ ಶತಮಾನಗಳವರೆಗೆ ಕರ್ನಾಟಕ ತನ್ನ ಬಾಗಿಲನ್ನು ತೆರೆದಿದೆ.[೧೦೫]

ಭಾರತ ದೇಶವು ಪ್ರಾಚೀನ ಕಾಲದಿಂದ ಹಿಡಿದು ಇಂದಿನವರೆಗೆ ಹಲವಾರು ಧರ್ಮಗಳನ್ನು ಪೋಷಿಸಿಕೊಂಡು ಬಂದಿದೆ. ಈ ಮಾತು ಸಮಗ್ರ ಕರ್ನಾಟಕಕ್ಕೂ ಸಲ್ಲುತ್ತದೆ. ಕರ್ನಾಟಕದ ಇತಿಹಾಸದೊಂದಿಗೆ ಚತುಷ್ಸಮಯಗಳಾದ ಬೌದ್ಧ, ಜೈನ, ವೈಷ್ಣವ ಮತ್ತು ಶೈವ ಧರ್ಮಗಳು ಕಾಣಿಸಿಕೊಂಡಿವೆ. ಇವುಗಳಲ್ಲಿ ಯಾವುದು ಮೊದಲು, ಯಾವುದು ಅನಂತರ ಎಂದು ಖಚಿತವಾಗಿ ಹೇಳುವುದು ಕಷ್ಟವಾದರೂ ತೀರಾ ಅನಾದಿ ಕಾಲದಲ್ಲಿಯೇ ಕರ್ನಾಟಕವು ವೈದಿಕ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿತ್ತು. ಚತುರ್ವರ್ಣ ಪದ್ಧತಿಯು ಕ್ರಮೇಣ ಜ್ವಾಲೆಯಾಗಿ ಪರಿಣಮಿಸಿ ಶೋಷಣೆ ಹೆಚ್ಚಾಯಿತು. ಇದರಿಂದ ಅರಿವಿನ ದಾರಿಯನ್ನು ಕಾಣದೇ ಜನಸಮುದಾಯ ನರಳುತ್ತಿರುವಾಗ ಅರಿತು ದಾರಿ ತೋರುವ ಮಹಾಪುರುಷರು ಅವತರಿಸುತ್ತಾರೆ ಎಂಬಂತೆ ಮಹಾನ್ ಪುರುಷರಾದ ಮಹಾವೀರ, ಬುದ್ದರು ಜನ್ಮ ತಾಳಿದರು. ಈ ನಿಟ್ಟಿನಲ್ಲಿ ಜಿನ ಮತ್ತು ಬೌದ್ಧ ಧರ್ಮಗಳು ಜನ್ಮ ತಾಳಿ ತಮ್ಮ ಪ್ರಭಾವವನ್ನು ವೃದ್ಧಿಸಿಕೊಂಡು ಮುಂದೆ ಇವು ಸ್ಥಳೀಯ ಮತಬೇಧಗಳೊಂದಿಗೆ ಕೂಡಿ ಶೋಷಣೆಗೆ ಇಳಿದವು. ಇವೆಲ್ಲವುಗಳಿಂದ ಬೇಸತ್ತ ಜನರು ಹೊಸ ಸಿದ್ಧಾಂತ, ಸಾಮಾಜಿಕತ ಧಾರ್ಮಿಕ ಸುಧಾರಣೆಗಾಗಿ ಕಾತುರರಾದರು.[೧೦೬] ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಬೌದ್ಧ, ಜೈನ ಧರ್ಮಗಳು ಕಾಣಿಸಿಕೊಂಡವು ಜನತೆಯ ನೋವುಗಳಿಗೆ ಸ್ಪಂದಿಸಿದ ೧೨ನೇ ಶತಮಾನದ ಶಿವಶರಣರು ವೀರಶೈವ ಸಿದ್ಧಾಂತವನ್ನು ಮುಂದಿಟ್ಟರು.[೧೦೭]

ಧರ್ಮವು ಸಂಸ್ಕೃತಿಯ ಜೀವಾಳ. ಮಾನವನ ಸಂಸ್ಕೃತಿಯ ನಿರ್ಮಾಣದಲ್ಲಿ ಧರ್ಮಕ್ಕೆ ಅಗ್ರಸ್ಥಾನವಿದೆ. ಧರ್ಮರಹಿತವಾದ ಸಂಸ್ಕೃತಿಯನ್ನು ಇತಿಹಾಸದಲ್ಲಿ ನಾವು ಎಂದಿಗೂ ಕಾಣಲು ಸಾಧ್ಯವಿಲ್ಲ. ಧರ್ಮವು

---

೧೦೫. ಡಾ. ರಂ.ಶ್ರೀ.ಮುಗಳಿ : ಕರ್ನಾಟಕ ಸಾಂಸ್ಕೃತಿಕ ಪರಂಪರೆ, ಧಾರವಾಡ, ೧೯೯೫, ಪು. ೧೦೫.
೧೦೬. ಮ.ಗು. ಹಂದ್ರಾಳ : ಪ್ರಮುಖ ಧರ್ಮಗಳು ಮತ್ತು ಧರ್ಮದ ಸಮನ್ವಯ, ಧಾರವಾಡ, ೧೯೮೦, ಪು. ೧೧೦-೧೧೨.
೧೦೭. ಡಾ. ಶೀಲಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಹಂಪಿ, ೧೯೭೦, ಪು. ೧೪೬.

ವಿಶ್ವದ ಇರುವಿಕೆಗೆ ಆಧಾರ ಮೂಲಭೂತವಾಗಿ ಬೆಳೆದು ನಿಂತು, ಒಂದು ನಾಡಿನ ಹಿರಿಮೆ ಗರಿಮೆಗೆ ಸಾಕ್ಷಿಯಾಗಿದೆ. ಒಂದು ನಾಡಿನ ಜನತೆಯ ಜೀವನ ರೀತಿ-ನೀತಿಯನ್ನು ರೂಪಿಸುವಲ್ಲಿ ಧರ್ಮದ ಪಾತ್ರ ಬಹುಮುಖ್ಯವಾದದ್ದು. ಬುಡಕಟ್ಟು ಜನಾಂಗದ ಧಾರ್ಮಿಕ ಜೀವನದ ಹಿನ್ನೆಲೆಯಲ್ಲಿ ನೆಲೆಗೊಂಡ ಆಚರಣೆಯಲ್ಲಿ ಸಂಪ್ರದಾಯಗಳು ಕ್ರಮೇಣ ಧರ್ಮದ ರೂಪ ಪಡೆಯುತ್ತದೆ ಎಂಬುದು ಸಮಾಜಶಾಸ್ತ್ರಜ್ಞರ ಅಭಿಮತವಾಗಿದೆ. ಭಾರತದ ಇತರ ಭಾಗಗಳಂತೆ ಕರ್ನಾಟಕವು ತನ್ನ ಹಲವಾರು ಬುಡಕಟ್ಟು ಜನಾಂಗಗಳ ಆಚರಣೆ ಪರಂಪರೆಗಳನ್ನು ಉಳಿಸಿಕೊಂಡು ಬಂದಿದೆ.[೧೦೮]

''ಜನಜೀವನದ ಸ್ವರೂಪಕ್ಕೆ ಧರ್ಮವೇ ನಿರ್ಣಾಯಕ ಶಕ್ತಿಯಂತಿತ್ತು''[೧೦೯] ಧರ್ಮವ್ನು ತನ್ನ ಜೀವನದ ಸರ್ವಸ್ವಪ್ನವಾಗಿ ಜೀವನದ ಎಲ್ಲಾ ರಂಗಗಳಲ್ಲಿಯೂ ಧರ್ಮವೇ ಹಾಸುಹೊಕ್ಕಾಗಿ ಪರಿಣಮಿಸಿತು. ಪಾಪಿಗಳು, ಕೋಪಿಷ್ಟರು, ದೇವಾಲಯಗಳನ್ನು ಅಥವಾ ಧರ್ಮವನ್ನು ಪ್ರವೇಶಿಸಬಾರದೆಂದು ಕ್ರಿ.ಶ. ೯೮೦ ರ ಸೊಗಲ ಶಾಸನದಿಂದ ಗೊತ್ತಾಗುತ್ತದೆ.[೧೧೦]

ಕರ್ನಾಟಕದ ಕೆಲವು ರಾಜಸಂತತಿಗಳಂತೆ ಬದಾಮಿ ಚಾಲುಕ್ಯ, ಕಲ್ಯಾಣಿ ಚಾಲುಕ್ಯ, ರಟ್ಟರ ಅರಸರು ಸನಾತನ ಧರ್ಮದ ಉದ್ಧಾರವು ತಮ್ಮ ಮುಖ್ಯ ಗುರಿಯೆಂದು ಭಾವಿಸಿದ್ದರು. ರಟ್ಟರ ಅರಸ ೨ನೇಯ ಲಕ್ಷ್ಮೀದೇವನ 'ಗುರುಮುನಿ' ಚಂದ್ರನು ರಾಜಗುರುವಾಗಿ ಶಸ್ತ್ರ, ಶಾಸ್ತ್ರಗಳ ವಿದ್ಯಾಗುರುವಾಗಿದ್ದನು. ನೇಸರಗಿಯ ಹೆಬ್ಬೆಯ ನಾಯಕನಿಗೆ ಗುರುಮುನಿ ಹೊನ್ನಯ್ಯನು ಮಾರ್ಗದರ್ಶಕನು ಆಗಿದ್ದನು.[೧೧೧]

ಬಾಗೆಯು ಅನೇಕ ಧಾರ್ಮಿಕ ಪಂಥಗಳ, ಧರ್ಮಗಳ, ಸಂಗಮವಾದ ನೆಲೆಬೀಡಾಗಿದ್ದು, ಪರಧರ್ಮ ಸಹಿಷ್ಣುತಾನೀತಿಗೆ ಹೆಸರುವಾಸಿಯಾಗಿದೆ. ಇಲ್ಲಿರುವ ಪ್ರಾಚೀನ ಹಾಗೂ ಅರ್ವಾಚೀನ ದೇವಾಲಯಗಳು, ಮಸೀದಿಗಳು, ಧಾರ್ಮಿಕ ಅಂಶಗಳನ್ನು ಹೇಳುತ್ತೇವೆ. ದೇವಾಲಯಗಳು, ಕೆರೆ, ಭಾವಿಗಳು ಭಾರತೀಯರ ಬದುಕಿನ ಜೀವಂತ ಸ್ಮಾರಕಗಳು. ನಮ್ಮ ನಾಗರಿಕತೆ, ಸಂಸ್ಕೃತಿ, ಅದರ ಒಳಿತು, ಕೆಡುಕುಗಳೆಲ್ಲವೂ ದೇವಸ್ಥಾನಗಳೊಂದಿಗೆ ಬೆಸೆದುಕೊಂಡಿವೆ.[೧೧೨]

ಕರ್ನಾಟಕದ ವೈಶಿಷ್ಟ್ಯವಾದ ಪರಮತ ಸಹಿಷ್ಣುತೆಯ ಮನೋಭಾವ ಕುಂತನಬಾಗೆಯ ಪ್ರದೇಶದಲ್ಲಿತ್ತು. ಧಾರ್ಮಿಕ ಕಾರ್ಯಗಳನ್ನು ಏರ್ಪಡಿಸಿ, ಧಾರ್ಮಿಕ ಜಾಗೃತಿ ಮೂಡಿಸಲು ಪುರಾಣ,

---

೧೦೮. ಡಾ. ಶೀಲಕಾಂತ ಪತ್ತಾರ: ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಹಂಪಿ, ೧೯೭೦, ಪು. ೧೪೬.

೧೦೯. ವಿ.ಜಿ.ಮಾರಿಹಾಳ: ಕರ್ನಾಟಕ ಸಾಂಸ್ಕೃತಿಕ ಸ್ವರೂಪ, ಪು. ೪೧.

೧೧೦. ಎಫಿಗ್ರಾಫಿಯಾ ಇಂಡಿಕಾ, ಸಂಪುಟ-೧೬, ಪು. ೩.

೧೧೧. ಎಫಿಗ್ರಾಫಿಯಾ ಇಂಡಿಕಾ, ಸಂಪುಟ-೧೮, ಪು. ೧೭೮.

೧೧೨. ಹೊಂಬೆಳಕು ಪತ್ರಿಕೆ, ಪು. ೫.

ಪ್ರವಚನ, ಭಜನೆ, ಕೀರ್ತನೆ, ಕಥಾಗೋಷ್ಠಿಗಳನ್ನು ನಡೆಸುವುದರ ಮೂಲಕ ಜನರಿಗೆ ಧರ್ಮೋಪದೇಶಗಳನ್ನು ಹಿಂದಿನ ಕಾಲದಲ್ಲಿ ಮಾಡುತ್ತಿದ್ದರು. ರಟ್ಟವಂಶದ ದೊರೆ ಕಾರ್ತವೀರ್ಯನಿಗೆ ಸಂಬಂಧಪಟ್ಟ ಕ್ರಿ.ಶ. ೧೦೪೧ ರ ರಾಯಬಾಗ ಶಾಸನದಿಂದ ಶಕವರ್ಷ ಮಹಾಮಂಡಳೇಶ್ವರ ಎರಿಗಿದೇವನ ಮಹಾಪ್ರಧಾನ ಮಂತ್ರಿ ಮಾದಿರಾಜ ಮಹಾದಾನಿಯೂ ಆಗಿದ್ದ. ಮೂಲಸ್ಥಾನ ಕಲಿದೇವ ದೇವಾಲಯ ಹಾಗೂ ಇತರ ದೇವಾಲಯಗಳ ಸಲುವಾಗಿ ದಾನ ಮಾಡಿದ ಉಲ್ಲೇಖವನ್ನು ಹೇಳಬಯಸುತ್ತದೆ.[೧೧೩]

ಕುಂತಣಬಾಗೆಯ ಪ್ರದೇಶದಲ್ಲಿ ಮುಖ್ಯವಾಗಿ ದೇವಾಲಯಗಳನ್ನು ಅಲ್ಪ, ಸ್ವಲ್ಪ ಪ್ರಮಾಣದಲ್ಲಿ ದೊರೆತ ಶಾಸನಗಳನ್ನು ನೋಡಲಾಗಿ ೧. ವೈಷ್ಣವ, ೨. ಶೈವ, ೩. ಜೈನ ಇವುಗಳಲ್ಲದೆ ವೃತ್ತಿಯಾಧಾರಿತ ಜಾತಿಗಳು ಇದ್ದಂತೆ ತೋರುತ್ತದೆ. ಇವುಗಳ ಬಗ್ಗೆ ಈ ಮುಂದೆ ಚರ್ಚಿಸಲಾಗುವುದು.

**ಶೈವಧರ್ಮ :**

ಭರತ ಭೂಮಿಯಲ್ಲಿ ಶೈವಧರ್ಮವು ಅತ್ಯಂತ ಅರ್ವಾಚೀನ ಧರ್ಮಗಳಲ್ಲೊಂದಾಗಿದೆ. ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆಂದು ಹೇಳಲಾಗಿದೆ. ಹರಪ್ಪಾ, ಮೊಹೆಂಜೋದಾರೋ ಸಂಸ್ಕೃತಿಯಲ್ಲಿ ಕೊಂಬು ಇರುವ ದೇವತೆಯ ಚಿತ್ರವಿರುವ ಮುದ್ರೆಗಳು, ಲಿಂಗಗಳು ದೊರೆತಿವೆ.[೧೧೪] ಇದರಿಂದ ಶಿವನ ಆರಾಧನೆ ಸಿಂಧೂ ಸಂಸ್ಕೃತಿಯಷ್ಟು ಹಿಂದೆ ಹೋಗುತ್ತದೆಂಬ ಊಹೆ. ಶಿವ ಆರ್ಯರ ರುದ್ರನಾಗಿ, ವೇದಗಳಲ್ಲಿ ಸ್ಥಾನವನ್ನು ಪಡೆದು ಕ್ರಮೇಣ ಹಿಂದೂ ಸಂಸ್ಕೃತಿಯ ಪ್ರಧಾನ ದೈವಗಳಲ್ಲಿ ಒಬ್ಬನಾಗಿದ್ದಾನೆ.[೧೧೫] ಕ್ರಿ.ಶ. ಪ್ರಾರಂಭದ ಶಾಸನಗಳಿಂದ ಆರ್ಯಧರ್ಮವು ರಾಜಾಶ್ರಯದ ಪ್ರೇರಣೆಯಿಂದ ಕನ್ನಡ ನಾಡಿನಲ್ಲಿ ಬಳಕೆಯಲ್ಲಿತ್ತೆಂದು ಊಹಿಸಬಹುದು.[೧೧೬]

ಶೈವಧರ್ಮದ ಅನುಯಾಯಿಗಳು ಸಾಮಾನ್ಯವಾಗಿ ಲಿಂಗವನ್ನು ಧರಿಸುತ್ತಿದ್ದರು. ಲಿಂಗವು ಶೈವಧರ್ಮದ ಸಂಕೇತ.[೧೧೭] ಕರ್ನಾಟಕದಲ್ಲಿ ಅನಾದಿ ಕಾಲದಿಂದಲೂ ಶಿವ ಮತ್ತು ಲಿಂಗಗಳ ಆರಾಧನೆಯಿರುವುದಕ್ಕೆ ಆಧಾರಗಳಿವೆ. ಕದಂಬರ ಕಾಲದಲ್ಲಿ ಶೈವ ದೇವಾಲಯಕ್ಕೆ ದಾನ ದತ್ತಿಗಳನ್ನು ಕೊಟ್ಟ ಶಾಸನಗಳೇ ಇದಕ್ಕೆ ಸಾಕ್ಷಿಯಾಗಿ ನಿಂತಿವೆ. ಕದಂಬರ ನಂತರ ಆಳ್ವಿಕೆ ನಡೆಸಿದ ಬದಾಮಿ ಚಾಲುಕ್ಯರು,

---

೧೧೩. ಜಿ.ಎನ್.ಉಪಾಧ್ಯ, ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿ.ವಿ. ಹಂಪಿ ಶಾಸನ ಸಂಪುಟ-೬, ಕ.ವಿ.ವಿ. ಹಂಪಿ, ೨೦೦೧, ಪು. ೫೯.

೧೧೪. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೨೧.

೧೧೫. ಡಾ. ಎಚ್.ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ, ಮೈಸೂರು, ೧೯೭೭, ಪು. ೧೯೮.

೧೧೬. ಜಿ.ಎಮ್. ಮೊರೆಸ್ : ದಿ ಕದಂಬ ಕುಲ, ದೆಹಲಿ, ೧೯೭೬, ಪು. ೨೪೯-೨೫೦.

೧೧೭. ಅ.ನ.ಕೃ. : ಕರ್ನಾಟಕ ಸಾಂಸ್ಕೃತಿಕ ದರ್ಶನ, ಪು. ೨೦೮.

ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ವಿಜಯನಗರ ಹೀಗೆ ಹಲವಾರು ಪ್ರಬೇಧಗಳಿರುವುದನ್ನು ಪ್ರಾಚೀನ ವಿದ್ವಾಂಸರು ತರ್ಕಿಸಿದ್ದಾರೆ.[೧೧೮] ಕ್ರಿ.ಶ. ೧೧೨೭ ರ ಚಾಲುಕ್ಯರ ಶಾಸನದಲ್ಲಿ ಹೂವಿನಬಾಗೆಯ ಅಧಿಕಾರಿಯು ಕೇಶವೇಶ್ವರ ದೇವಾಲಯಕ್ಕೆ ದಾನ-ದತ್ತಿಗಳನ್ನು ನೀಡಿದ ಉಲ್ಲೇಖ ಬರುವುದು.[೧೧೯]

ಕರ್ನಾಟಕದ ಶೈವ ಇತಿಹಾಸದಲ್ಲಿ ಕಾಪಾಲಿಕರ ಸಂಖ್ಯೆ ಇಲ್ಲವೆನ್ನುವಷ್ಟು ಕಡಿಮೆ ಲಾಕುಳ ಶೈವ ಅಥವಾ ಪಾಶುಪಥ, ಕಾಳಾಮುಖರು ಹಾಗೂ ವೀರಶೈವರು ಸಾಕಷ್ಟು ಪ್ರಭಾವ ಪಾತ್ರ ವಹಿಸಿರುವುದು ಸ್ಪಷ್ಟವಾಗುತ್ತದೆ. ಆದಸೆ ಪಾಶುಪತ ಕಾಳಾಮುಖರು ಯಾವಾಗ ಬಂದರು? ಹೊರಗಿನವರಾಗಿದ್ದರೆ? ಕರ್ನಾಟಕಕ್ಕೆ ಏಕೆ ಬಂದರು? ಎನ್ನುವ ವಿಷಯು ಇನ್ನೂ ಹೆಚ್ಚಿನ ಸಂಶೋಧನೆಗಳಿಂದ ಗೋಚರವಾಗಬೇಕಾಗಿದೆ.[೧೨೦] ಪಾಶುಪತ, ಕಾಳಾಮುಖ, ಕಾಪಾಲಿಕರಲ್ಲಿ ಸಾತ್ವಿಕ ಆಚರಣೆಗಳಿಂದ ಒಂದೇ ಗುಂಪಿಗೆ ಸೇರುತ್ತಾರೆ. ಮುಖದ ಮೇಲೆ ಭಸ್ಮವನ್ನು ಹಚ್ಚಿಕೊಳ್ಳುವ ಮೂಲಕ ಕಾಳಾಮುಖರೆನ್ನಿಸಿಕೊಂಡಿರಬಹುದಾದ ಇವರಿಗೂ ದಿನದಲ್ಲಿ ಮೂರು ವೇಳೆ ವಿಭೂತಿ, ಸ್ನಾನ ಮಾಡಬೇಕೆನ್ನುವ ಪಾಶುಪತೀಯರಿಗೂ ಹೆಚ್ಚಿನ ವ್ಯತ್ಯಾಸವಿಲ್ಲ.[೧೨೧]

ಪಾಶುಪತ ಪಂಥದ ಬಗ್ಗೆ ಶಿವಪುರಾಣದಲ್ಲಿ ಹಾಗೂ ವಾಮನಪುರಾಣದಲ್ಲಿ ಪ್ರಸ್ತಾಪ ಬರುವುದುಂಟು. ಪಾಶುಪತ ದೀಕ್ಷೆ ಪಡೆದರೆ ಉಚ್ಚ ಜಾತಿಯವ ಎಂಬ ಮನೋಭಾವನೆ. ದೀಕ್ಷೆ ಪಡೆಯುವವನು ಯಾವ ಜಾತಿಯವನೇ ಇರಬಹುದು. ಸಿದ್ಧಿ ಪಡೆಯುವುದಕ್ಕೋಸ್ಕರ ಭಿಕ್ಷೆ ಬೇಡಲು ಶಿವನ ಬಳಿ ಹೋಗಲು ಪ್ರಯತ್ನಿಸುತ್ತಾನೆ. ಅವರೇ ಕಾಪಾಲಿಕರು. ಇವರನ್ನು 'ಧ್ವಜಿ' ಎಂದು ಕರೆಯುವರು.[೧೨೨]

**ಲಕುಳೀಶ :**

ಇವರು ಅಷ್ಟದಿಕ್ಪಾಲಕರನ್ನು ಪೂಜಿಸುವವರು. 'ಲಾಕುಳ' ಇದರ ಅರ್ಥ ದಂಡ ಎಂದರೆ ವೇದಗಳು ಎಂದರ್ಥ. ಎಡಗೈಯಲ್ಲಿ ದಂಡವನ್ನು, ಬಲಗೈಯಲ್ಲಿ ಮಾವಿನ ಹಣ್ಣನ್ನು ಹಿಡಿದವನು ಲಕುಳೀಶ. ಅವನು

---

೧೧೮. ಡಾ. ಎಚ್.ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ, ಮೈಸೂರು, ೧೯೭೭, ಪು. ೧೯೮.

೧೧೯. ಜಿ.ಎನ್. ಉಪಾಧ್ಯ, ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿ.ವಿ. ಹಂಪಿ ಶಾಸನ ಸಂಪುಟ-೬, ಕ.ವಿ.ವಿ. ಹಂಪಿ, ೨೦೦೧, ಪು. ೫೮.

೧೨೦. ಡಾ. ಎಸ್.ಕೆ.ಕೊಪ್ಪಾ : ತರ್ದವಾಡಿ ನಾಡು : ಒಂದು ಅಧ್ಯಯನ, ಇಂಡಿ, ೧೯೯೦, ಪು. ೨೭೦.

೧೨೧. ಡಾ. ಎಸ್.ಕೆ.ಕೊಪ್ಪಾ : ತರ್ದವಾಡಿ ನಾಡು : ಒಂದು ಅಧ್ಯಯನ, ಇಂಡಿ, ೧೯೯೦, ಪು. ೨೭೧.

೧೨೨. ಶ್ರೀಮತಿ ವಸುಂಧರಾ ಫಿಲಿಯೋಜ : ಕರ್ನಾಟಕದ ಕಾಳುಮುಖರು (ವಿಶೇಷೋಪನ್ಯಾಸ) ಕ.ಸಂ.ಸಂ., ಧಾರವಾಡ, ದಿನಾಂಕ ೨೫-೧೧-೨೦೦೦.

ವೇದಗಳೆಂಬ ದಂಡ ಹಿಡಿಯುವುದು, ಧರ್ಮಗಳೆಂಬ ನರ್ತಕಿಯರನ್ನು ಆಡಿಸುತ್ತಿರುವ ನಟನೆ ಲಕುಳೀಶನೆಂದು ಹೇಳುತ್ತಾರೆ.[೧೨೩]

**ಕಾಳಾಮುಖರು :**

ಪಶುಪತಿ ಮತ್ತು ಲಕುಳೀಶರು ಮುಖದ ಮೇಲೆ ಭಸ್ಮವನ್ನು ಹಚ್ಚಿಕೊಳ್ಳುವುದರಿಂದ ಇವರನ್ನು ಕಾಳಾಮುಖರೆಂದು ಕರೆಯುತ್ತಿರಬಹುದೆಂದು ಗೋಪಿನಾಥರವರ ಅಭಿಮತವಾಗಿದೆ.[೧೨೪] ಪ್ರಾಚೀನ ದೇವಾಲಯಗಳಲ್ಲಿ ಕಾಳಾಮುಖರು ಗುರುಗಳಾಗಿ ದೇವಸ್ಥಾನದ ಕಾರ್ಯಭಾರ ನೋಡಿಕೊಂಡು ಹೋಗುತ್ತಿದ್ದರು. ಲಕುಳೀಶ ಮತ್ತು ಕಾಳಾಮುಖರ ಸಂಪ್ರದಾಯಗಳು ಪರ್ಯಾಯನಾಮ ಹೊಂದಿ ನಿಜಗುಣ ಶಿವಯೋಗಿಗಳಿಗೆ ಶೈವ ಲಾಕುಳರಾದರು. ಕರ್ನಾಟಕದಲ್ಲಿ ೧೨ನೇ ಶತಮಾನದಲ್ಲಿ ಪ್ರಭಾವಶಾಲಿಗಳಾಗಿ ಕಾಣಿಸಿಕೊಂಡು ಕ್ರಿ.ಶ. ೫, ೬ನೇ ಶತಮಾನಗಳ ಬಳಿಕ ಇವರ ಇತಿಹಾಸ ಪ್ರಾರಂಭವಾಗಿ ಮುಂದೆ ಪರಿವರ್ತನವಾಗಿ ಇಂದಿನ ಜಂಗಮರಾಗಿ ಉಳಿದಿರುವುದೆಂದು ಡಾ. ಎಸ್.ಎಸ್. ಮಾಳವಾಡರವರು ತಮ್ಮ ಉಪನ್ಯಾಸ ಮಾಲೆಯಲ್ಲಿ ಲಾಕುಳಶೈವರ ಇತಿಹಾಸ ಕುರಿತು ವಿವರಿಸುತ್ತಾರೆ.[೧೨೫] ಈ ಲಾಕುಳರು ಮುಂದೆ ಪಾಶುಪತ ಶೈವರಾಗಿ ಉಳಿದರೆಂದು ಡಾ. ಎಮ್.ಎಮ್.ಕಲಬುರ್ಗಿಯವರು ಗಮನ ಸೆಳೆದಿದ್ದಾರೆ.[೧೨೬]

ನಮ್ಮ ಅಧ್ಯಯನದ ಪರಿಮಿತಿಯಲ್ಲಿ ವೀರಶೈವದ ಹಿನ್ನೆಲೆಯಲ್ಲಿ ಪಾಶುಪತ ಮತ್ತು ಕಾಳಾಮುಖ ಪರಂಪರೆ ಹೆಚ್ಚು ಪ್ರಭಾವಶಾಲಿಯಾಗಿ ಬೆಳೆಯದಿದ್ದನ್ನು ಕಾಣಬಹುದಾಗಿದೆ. ಕ್ರಿ.ಶ. ೮-೯ನೇ ಶತಮಾನದಲ್ಲಿ ಕಲ್ಯಾಣಿ ಚಾಲುಕ್ಯರು ವೈಭವದಿಂದ ರಾಜ್ಯಭಾರ ಮಾಡಿದ ಕಾಲವೆನ್ನಬಹುದು. ಈ ಅವಧಿಯಲ್ಲಿ ಕರ್ನಾಟಕದ ದಕ್ಷಿಣ ಹಾಗೂ ದಕ್ಷಿಣದ ಪೂರ್ವಭಾಗಗಳಲ್ಲಿ ಅಭಿವೃದ್ಧಿ ಪಥದಲ್ಲಿದ್ದ ವೈಷ್ಣವ ಧರ್ಮವು ಉತ್ತರ ಭಾಗದ ಶೈವ ಧರ್ಮದೊಂದಿಗೆ ಹೊಂದಾಣಿಕೆ ಹಾಗೂ ಸಂಧಾನ ನಡೆಸಿತ್ತು. ಆದರೆ ಇದೇ ವೇಳೆಯಲ್ಲಿ ಸಾಮಾನ್ಯರೊಂದಿಗಿನ ನಿಕಟ ಸಂಬಂಧ ಮತ್ತು ರಾಜಕೀಯ ಪೋಷಣೆಯ ದೃಷ್ಟಿಯಿಂದ ಹೆಚ್ಚಿನ ಗೌರವ ಪಡೆದ ಕಾಳಾಮುಖ ಪಾಶುಪತರು ತಮ್ಮ ಸ್ಥಾನ ಭದ್ರಪಡಿಸಿಕೊಂಡಿದ್ದರು. ಮುಂದೆ ಆಳ್ವಿಕೆ

---

೧೨೩. ಶಿ.ಬಾ. ಪಾಟೀಲ, ಪು. ೧೯೫.

೧೨೪. ಟಿ.ಎ. ಗೋಪಿನಾಥರಾವ್ : ಎಲಿಮೆಂಟ್ಸ್ ಆಫ್ ಹಿಂದೂ ಐಕೋನೋಗ್ರಾಫಿ, ಸಂಪುಟ-II, ಸಂಚಿಕೆ-I, ದೆಹಲಿ, ೧೯೭೧, ಪು. ೨೩.

೧೨೫. ಡಾ. ಎಸ್.ಎಸ್.ಮಾಳವಾಡ : ಕರ್ನಾಟಕ ಲಾಕುಳ ಶೈವರ ಇತಿಹಾಸ, ಧಾರವಾಡ, ೧೯೯೫, ಪು. ೧೧.

೧೨೬. ಡಾ. ಎಮ್.ಎಮ್.ಕಲಬುರ್ಗಿ : ಅಭಿನವ ಪಾಶುಪತ ಮೈತ್ರಿ, ವೀರಶೈವ ಲೇಖನದಿಂದ ಸಂಗ್ರಹಿಸಲಾಗಿದೆ, ಬಸವಪಥ, ಸಂಪುಟ-೭, ಸಂಚಿಕೆ-I, ಪು. ೫೩-೫೮.

ನಡೆಸಿದ ಕಲಚೂರಿ ಮತ್ತು ಯಾದವ ಅರಸು ಮನೆತನಗಳ ಕಾಲಕ್ಕೂ ಆ ಸ್ಥಾನ ಸಡಿಲಗೊಳ್ಳಲಿಲ್ಲವೆಂಬುದು ತಿಳಿದುಬರುವ ಸಂಗತಿ.

ವಿದ್ವಾಂಸರ ಅಭಿಪ್ರಾಯದಂತೆ ಪಾಶುಪತ ಕಾಳಾಮುಖದ ಒಂದು ಪಂಗಡವಾಗಿ ಹೊಸತನ್ನು ಮೈಗೂಡಿಸಿಕೊಂಡು ಕಾಲಾನಂತರ ಅದುವೇ ವೀರಶೈವವಾಯಿತು. ನಂತರ ರಾಜಕೀಯ, ಸಾಮಾಜಿಕ ಹಿನ್ನೆಲೆಯಲ್ಲಿ ಹೊಸ ಸ್ವರೂಪ ಪಡೆಯುತ್ತ ಇಂದಿನ ಲಿಂಗಾಯತ ಧರ್ಮವಾಗಿ ಉಳಿಯಿತು.[೧೨೭] ಅಭಿನವ ಪಾಶುಪತ ಅಥವಾ ವೀರಶೈವ ಹಳೆಯ ಕಾಳಾಮುಖ, ವಿಶಿಷ್ಟಾದ್ವೈತ, ದ್ವೈತ, ಶಿವಾದ್ವೈತ ಎಂದು ಹೆಸರಾಯಿತು.[೧೨೮] ಸಾಮಾನ್ಯವಾಗಿ ಶಿವಾಗಮಗಳನ್ನು ಪ್ರಮಾಣವೆಂದು ಭಾವಿಸದೇ ಅಲ್ಲಲ್ಲಿ ವೇದಗಳ ಶ್ಲೋಕಗಳನ್ನು ಹೇಳುತ್ತಾ ಶೈವಾಗಮದೊಡನೆ ಒಮ್ಮತ ಹೊಂದಿ ವೇದ ಸಮ್ಮತವೆಂದು ಹೇಳಿರುವುದುಂಟು.[೧೨೯] ಮಹಾಭಾರತದಲ್ಲಿ ಪಾಶುಪತ ಆಗಮದ ಉಲ್ಲೇಖ ಬರುತ್ತದೆ. ಶಿವಾಗಮ ಪ್ರತಿಗಳು ನೇಪಾಳದ ದರ್ಬಾದಲ್ಲಿ, ಕ್ಯಾಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ಶಿವಾಗಮಗಳು ಭೂರ್ಜ್ವಪತ್ರದಲ್ಲಿವೆ. ಪ್ಯಾರಿಸ್‌ನಲ್ಲಿ ೨೮ ತಾಳೆಯ ಗರಿಯ ಮೇಲೆ ಕಂಡುಬರುತ್ತವೆ. ಕಾಶ್ಮೀರ, ಬಂಗಾಳ, ಮಹಾರಾಷ್ಟ್ರ, ಕರ್ನಾಟಕ ಹೀಗೆ ಇತ್ಯಾದಿ ಪ್ರದೇಶಗಳಲ್ಲಿ ಈ ಪ್ರತಿಗಳು ದೊರೆಯುತ್ತವೆಂದು ಶ್ರೀಮತಿ ವಸುಂಧರಾ ಅವರ ಅಭಿಪ್ರಾಯವಾಗಿದೆ. ಈ ಎಲ್ಲ ವಿಷಯವನ್ನು ನೋಡಿದಾಗ ಶೈವ ಧರ್ಮಕ್ಕೆ ಎಷ್ಟೊಂದು ಪ್ರೋತ್ಸಾಹ ಹಾಗೂ ಸಹಾನುಭೂತಿ ಇತ್ತೆಂಬುದು ನಮಗೆ ತಿಳಿದುಬರುವುದು.

**ವೈಷ್ಣವ ಧರ್ಮ :**

ಶಿವನಿಗೆ ಒಂದು ಇತಿಹಾಸವಿರುವಂತೆ ಹಿಂದೂ ಧರ್ಮದಲ್ಲಿ ಅವನಷ್ಟೇ ಪ್ರಬಲನಾದ ವಿಷ್ಣುವಿಗೂ ಒಂದು ಇತಿಹಾಸವಿದೆ. ವೈಷ್ಣವ ಧರ್ಮದವರು ವಿಷ್ಣುವನ್ನು ಆರಾಧಿಸುತ್ತಿದ್ದರು. ಬೌದ್ಧಿಕವಾಗಿ ಜ್ಞಾನಕ್ಕಿಂತ ಭಾವರೂಪವಾದ ಭಕ್ತಿಯೇ ಶ್ರೇಷ್ಠವೆಂದು ವೈಷ್ಣವ ಧರ್ಮ ಒತ್ತಿ ಒತ್ತಿ ಹೇಳುತ್ತದೆ. ವಿಷ್ಣುವು ವೇದಗಳಲ್ಲಿ ಪ್ರಧಾನ ದೇವತೆಯಲ್ಲದಿದ್ದರೂ ಅಪ್ರಧಾನವೇನೂ ಅಲ್ಲ. ಅವನು ತನ್ನ ಮೂರು ಹೆಜ್ಜೆಗಳಿಂದ ಸಮಸ್ತ ಮೂರು ಲೋಕವನ್ನೇ ಅಳಿಯುವುದನ್ನು ಆಹ್ಲಾದಕರ ನೀತಿಯಲ್ಲಿ ಋಗ್ವೇದದಲ್ಲಿ ಉಲ್ಲೇಖಿಸಿರುವುದು ದೇವತೆಗಳಲ್ಲಿ ವಿಷ್ಣುವೇ ವರಿಷ್ಠ ದೇವತೆಯೆಂದು ಆಗ್ನಿಯೇ

೧೨೭. ಈಶ್ವರನ್ ಹಿರೇಮಲ್ಲೂರ: ಲಿಂಗಾಯತ ಧರ್ಮ ಸಾಂಸ್ಕೃತಿಕ ಮತ್ತು ಸಮಾಜ, ಬೆಂಗಳೂರು, ೧೯೫೦, ಪು. ೪೫.
೧೨೮. ಡಾ. ಎಚ್.ತಿಪ್ಪೇರುದ್ರಸ್ವಾಮಿ, ಎಚ್: ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ೧೯೬೭, ಪು. ೬೫.
೧೨೯. ಅದೇ ಪು. ೧೭೨.

ಕನಿಷ್ಟದೇವತೆಯೆಂದುಐತ್ತರೇಯ ಬ್ರಾಹ್ಮಣವು ವರ್ಣಿಸುತ್ತದೆ.[೧೩೦] ಕ್ರಿ.ಶ. ಪೂರ್ವದಲ್ಲಿಯೇ ದಕ್ಷಿಣ ಭಾರತವನ್ನು ಪ್ರವೇಶ ಮಾಡಿದ ವೈಷ್ಣವ ಧರ್ಮ ಕ್ರಿ.ಶ. ೪ನೇ ಶತಮಾನದ ವೇಳೆಗೆ ಕರ್ನಾಟಕದಲ್ಲಿ ಜನಪ್ರಿಯವಾಯಿತು.[೧೩೧]

ಕನ್ನಡ ಭಾಷೆಯ ಅತ್ಯಂತ ಪ್ರಾಚೀನವಾದ ಹಲ್ಮಿಡಿ ಶಾಸನವು ವಿಷ್ಣುವಿನ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ. ಹಾಗೆಯೇ ಕ್ರಿ.ಶ. ೧೦೪೦ ರ ರಟ್ಟ ದೊರೆ ಕಾರ್ತವೀರ್ಯ್ಯನ ಶಾಸನವು ವಿಷ್ಣು ಹಾಗೂ ಶಿವನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.[೧೩೨] ಕುಂತನಬಾಗೆಯ ಪ್ರದೇಶವನ್ನು ಆಳಿದ ಚಾಲುಕ್ಯ ಮಂಗಳೇಶನು (೫೯೬-೬೦೯) ಬದಾಮಿಯಲ್ಲಿ ಪ್ರಸಿದ್ಧ ಗುಹಾಂತರ ದೇವಾಲಯಗಳನ್ನು ನಿರ್ಮಿಸಿದನು. ಅತ್ತಿಮಬ್ಬೆಯ ಲಕ್ಕುಂಡಿ ಶಾಸನದಲ್ಲಿ ಮಹಾಜನರು 'ವೈಷ್ಣವಗೀತ' ಮನೋಹರ ಎಂದು ಕರೆಯಲಾಗಿದೆ.[೧೩೩]

**ಜೈನಧರ್ಮ :**

ಶಿವನಾಗಲಿ, ವಿಷ್ಣುವಾಗಲಿ, ಯಾವ ಧರ್ಮವನ್ನು ಉಪದೇಶ ಮಾಡಿಲ್ಲ. ಜಿನನಿಂದ ಬೋಧಿಸಲ್ಪಟ್ಟ ಧರ್ಮವೇ ಜೈನಧರ್ಮ.[೧೩೪] ಜಿನನು ಅವತಾರಿಯಲ್ಲ. ತನ್ನ ಸ್ವಂತ ಬಲದಿಂದ ವಿಕಾರಗಳನ್ನು ಜಯಿಸಿ ಜಿನನಾದವನು. ಇಂತಹ ಜೈನಧರ್ಮವು ಅನಾದಿ ಕಾಲದಲ್ಲಿ ಒಂದು ಪ್ರಬಲ ಧರ್ಮವಾಗಿತ್ತು. ಕ್ರಿ.ಶ.ಪೂ. ೩ನೇ ಶತಮಾನದಿಂದಲೂ ಈ ಧರ್ಮ ಕರ್ನಾಟಕದಲ್ಲಿತ್ತು ಎಂಬುದಕ್ಕೆ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ.ಪೂ. ೩೦೦ ರ ಹೊತ್ತಿಗೆ ಭದ್ರಬಾಹು ಮತ್ತು ಚಂದ್ರಗುಪ್ತರಿಂದ ದಕ್ಷಿಣ ಕರ್ನಾಟಕಕ್ಕೆ ಜೈನಧರ್ಮವನ್ನು ಪ್ರಸಾರ ಮಾಡಲುಕಾಲಿಟ್ಟರು.[೧೩೫] ಜೈನಧರ್ಮವು ಹಂತ ಹಂತವಾಗಿ ಪ್ರಚಾರ ಪಡೆಯುತ್ತಾ ಜನರ ಮೇಲೆ ಪ್ರಭಾವ ಬೀರುತ್ತಾ ಕರ್ನಾಟಕವು ಜೈನಧರ್ಮದ ಪ್ರಮುಖ ಕೇಂದ್ರವಾಗಿ ಪರಿಣಮಿಸಿತು. ರಾಯಭಾಗದಲ್ಲಿರುವ ಕ್ರಿ.ಶ. ೧೦೨೭ ರ ಶಾಸನವು ಅದೇ ರೀತಿಯಲ್ಲಿ ಕ್ರಿ.ಶ. ೧೦೪೦ ರ ಶಾಸನವು ಎರಗಿದೇವನ ಮಹಾಪ್ರಧಾನ ಮಾದಿರಾಜ ಪೂವಿನಬಾಗೆಯ ಯಾಪನೀಯ ಸಂಘದ ಮೂಲ

---

೧೩೦. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೬೧-೧೬೩.

೧೩೧. ಡಾ. ಎಸ್.ಕೆ.ಕೊಪ್ಪಾ : ತರ್ದವಾಡಿ ನಾಡು : ಒಂದು ಅಧ್ಯಯನ, ಇಂಡಿ, ೧೯೯೦, ಪು. ೨೭೬.

೧೩೨. ಕ.ವಿ.ವಿ. ಹಂಪಿ ಶಾಸನ ಸಂಪುಟ-೬, ಪು. ೫೯.

೧೩೩. ಕ.ವಿ.ವಿ. ಹಂಪಿ ಶಾಸನ ಸಂಪುಟ-೬, ಪು. ೧೬೪-೧೬೫.

೧೩೪. ಕೈಲಾಸಚಂದ್ರಸ್ವಾಮಿ (ಅನು.) : ಭುಜಬಳಶಾಸ್ತ್ರಿ., ಜೈನ ಧರ್ಮ, ೧೯೮೧, ಪು. ೭೫.

೧೩೫. ಡಾ. ಎಚ್.ತಿಪ್ಪೇರುದ್ರಸ್ವಾಮಿ, ಎಚ್ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ೧೯೬೭, ಪು. ೧೯೧.

ಬಸದಿಯನ್ನು ಜೀರ್ಣೋದ್ಧಾರ ಮಾಡಲು ಅನೇಕ ದಾನ-ದತ್ತಿಗಳನ್ನು ನೀಡಿದ್ದನೆಂದು ತಿಳಿದುಬರುವುದು.[೧೩೬] ಅದೇನಿದ್ದರೂ ಜೈನಧರ್ಮ ಕುಂತಣಬಾಗೆಯ ಪ್ರದೇಶದಲ್ಲಿದ್ದುದಂತೂ ಖಚಿತ. ರಾಷ್ಟ್ರಕೂಟರು ಜೈನರಾಗಿದ ಕಡೆಗೆ ಅವರ ಒಲವು ವಿಶೇಷವಾಗಿತ್ತು. ಕ್ರಿ.ಶ. ೯೮೦ ರ ಸವದತ್ತಿ ಶಾಸನದಲ್ಲಿ ಬಸದಿಯೊಂದನ್ನು 'ರಟ್ಟರಪಟ್ಟ ಜಿನಾಲಯ' ಎಂದು ಕರೆದಿರುವುದು ರಾಷ್ಟ್ರಕೂಟರು ಜೈನಧರ್ಮಕ್ಕೆ ಎಷ್ಟು ಪ್ರಾಧಾನ್ಯತೆಯನ್ನು ನೀಡಿದ್ದರೆಂಬುದು ತಿಳಿದುಬರುತ್ತದೆ.[೧೩೭]

**ಯಾಪನೀಯ ಸಂಘ :**

ಜೈನಧರ್ಮದ ದಿಗಂಬರ ಮತ್ತು ಶ್ವೇತಾಂಬರ ಪಂಥಗಳನ್ನು ಪ್ರಾಯಶಃ ಎಲ್ಲರೂ ಬಲ್ಲರು. ಅವೆರಡನ್ನೂ ಹೊರತಾಗಿ ಜೈನಧರ್ಮದಲ್ಲಿ ಯಾಪನೀಯ ಸಂಘವೆಂಬುದು ಜಾರಿಯಲ್ಲಿತ್ತು.[೧೩೮] ಈ ಪ್ರದೇಶದಲ್ಲಿ ಯಾಪನೀಯ ಸಂಘ ಚಲಾವಣೆಯಲ್ಲಿತ್ತು ಎಂಬುದಕ್ಕೆ ಹಲವಾರು ಶಾಸನ ಆಧಾರಗಳಿವೆ. ಉದಾಹರಣೆಗಾಗಿ ಕದಂಬ ಮೃಗೇಶವರ್ಮನು ತನ್ನ ಆಳ್ವಿಕೆಯ ೮ನೇ ವರ್ಷದಲ್ಲಿ ಬೆಳಗಾಂವ್ ಜಿಲ್ಲೆಯ ಖಾನಾಪುರ ತಾಲೂಕಿನ 'ಹಲಸಿ'ಯಲ್ಲಿ ಒಂದು ಜಿನಾಲಯವನ್ನು ಕಟ್ಟಿಸಿ ಯಾಪನೀಯ ಸಂಘವನ್ನು ಸ್ಥಾಪನೆ ಮಾಡಿದನೆಂದು ತಿಳಿದುಬರುತ್ತದೆ.[೧೩೯] ಈ ನಿಟ್ಟಿನಲ್ಲಿ ಕುಂತಣಬಾಗೆಯು ಕೂಡ ಒಂದು ಜೈನಕೇಂದ್ರವಾಗಿತ್ತು.

**ಬೌದ್ಧ ಧರ್ಮ :**

ಬೌದ್ಧಧರ್ಮ ಹಿಂದೂ ಧರ್ಮದಂತೆ ಒಂದು ಪ್ರಾಚೀನ ಸ್ವತಂತ್ರ ಧರ್ಮವಾಗಿದೆ. ಜೈನಧರ್ಮ ಹಿಂದೂ ಧರ್ಮದಿಂದಭಿನ್ನವಾಗಿದ್ದು ಜೈನಧರ್ಮದ ಉಗಮ ಭಾರತದಲ್ಲಿಯೇ ಆದರೂ ಬೌದ್ಧಧರ್ಮ ಜೈನಧರ್ಮಕ್ಕಿಂತ ಸ್ವಲ್ಪ ಹಿಂದಿನದು.[೧೪೦] ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಬೌದ್ಧಧರ್ಮದ ಪ್ರಸಾರ ಕುರಿತು ಹಲವಾರು ವಿಷಯಗಳು ತಿಳಿದುಬಂದಿವೆ. ಸನ್ನತಿ, ಐಹೊಳೆ, ಕದಂಬ, ಕೋಳಿವಾಡ, ಚಂದ್ರವಳ್ಳಿ, ಬಳ್ಳಿಗಾವೆ, ಬನವಾಸಿ, ಡಂಬಳ ಮೊದಲಾದ ಸ್ಥಳಗಳಲ್ಲಿ ದೊರೆತಿರುವ ಅವಶೇಷಗಳು ಮತ್ತು

---

೧೩೬. ಕ.ವಿ.ವಿ. ಹಂಪಿ ಶಾಸನ ಸಂಪುಟ-೬, ಪು. ೫೮-೫೯.

೧೩೭. ಜೆ.ಬಿ.ಬಿ.ಆರ್.ಎಸ್. ಸಂಪುಟ-೧೦, ಪು. ೨೦೪.

೧೩೮. ಡಾ. ಮಿರ್ಜಿ ಅಣ್ಣಾರಾಯ : ಜೈನಧರ್ಮ, ಮೈಸೂರು, ೧೯೫೨, ಪು. ೮೭.

೧೩೯. ಡಾ. ಅ. ಸುಂದರ : ಕರ್ನಾಟಕ ಮತ್ತು ಜೈನ ಸಂಸ್ಕೃತಿ- ಕರ್ನಾಟಕದಲ್ಲಿ ಜೈನಶಿಲ್ಪ, ರಜತಮಹೋತ್ಸವ ಪ್ರಕಟಣೆ, ಕ.ವಿ.ವಿ. ಧಾರವಾಡ, ೧೯೭೫, ಪು. ೧೩೧.

೧೪೦. ಬಿ.ಎಂ.ಶ್ರೀಕಂಠಯ್ಯ (ಪ್ರ.ಸಂ.): ಕನ್ನಡ ನಾಡಿನ ಚರಿತ್ರೆ, ಸಂಪುಟ-೨, ಬೆಂಗಳೂರು, ೧೯೯೪, ಪು. ೧೮೦.

ಶಾಸನಗಳು, ದೀಪವಂಶ, ಮಹಾವಂಶ ಗ್ರಂಥಗಳು ಹಾಗೂ ಹೂಯೆನ್‌ತ್ಸಾಂಗನ ವರದಿಗಳು ಕರ್ನಾಟಕದಲ್ಲಿ ಬೌದ್ಧಧರ್ಮ ಪ್ರಸಾರದಲ್ಲಿತ್ತೆಂದು ತಿಳಿಸಿಕೊಡುವ ಆಕರಗಳಾಗಿವೆ.[೧೪೧] ಈ ನಿಟ್ಟಿನಲ್ಲಿ ಕುಂತನಬಾಗೆಯು ಪ್ರಾದೇಶಿಕವಾಗಿ ಬೌದ್ಧಧರ್ಮ ಪ್ರಸಾರದಲ್ಲಿತ್ತೆಂದು ಹೇಳಲು ಸಾಧ್ಯತೆಯುಂಟು. ಒಟ್ಟಾರೆ ಅಂದಿನ ಕರ್ನಾಟಕದಲ್ಲಿ ಸುಸ್ಥಿತಿಯಲ್ಲಿರಲಿಲ್ಲವೆಂದು ಹೂಯೆನ್‌ತ್ಸಾಂಗ್‌ನ ವರದಿಯಿಂದ ಸ್ಪಷ್ಟವಾಗುತ್ತದೆ. ಮಧ್ಯಯುಗೀನ ಕರ್ನಾಟಕದಲ್ಲಿ ಆಗಲೇ ಅವಸಾನದ ಸ್ಥಿತಿಯಲ್ಲಿದ್ದ ಬೌದ್ಧಧರ್ಮದ ಕುರುಹುಗಳಾಗಿ ಬೆರಳೆಣಿಕೆಯಷ್ಟು ನೆಲೆಗಳು ಕಂಡುಬರುತ್ತವೆ. ಈ ನೆಲೆಗಳಲ್ಲಿರುವ ಶಾಸನಗಳು ಅಥವಾ ಶಿಲ್ಪಗಳು ತಾಂತ್ರಿಕ ಧರ್ಮದ ಅಸ್ತಿತ್ವವನ್ನು ಸೂಚಿಸುತ್ತವೆ.

**ಅಗ್ರಹಾರ :**

ಅಗ್ರಹಾರವೆಂದರೆ ಶ್ರೇಷ್ಠ ಸಮುದಾಯಕ್ಕೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದರ್ಥ. ಸವದತ್ತಿ ರಟ್ಟರ ಆಳ್ವಿಕೆಯಲ್ಲಿ ಅಗ್ರಹಾರ ಘಟಿಕೆಗಳಿದ್ದ ಉಲ್ಲೇಖ ಶಾಸನದಲ್ಲಿ ಬರುತ್ತದೆ. ರಾಯಭಾಗ[೧೪೨] ಹಾಗೂ ತೇರದಾಳದಲ್ಲಿ ೬೪ ಘಟಿಕಾಸ್ಥಾನಗಳಿದ್ದ ವಿಷಯ ತಿಳಿದುಬರುವುದು.[೧೪೩] ಅಗ್ರಹಾರದ ಬಗ್ಗೆ ಇನ್ನೊಂದು ಬಗೆಯಾಗಿ ಹೇಳುವುದಾದರೆ ಬ್ರಾಹ್ಮಣರಿಗೆ ಜೀವನ ನಡೆಸುವುದಕ್ಕಾಗಿ ವಹಿಸಿಕೊಟ್ಟ ಹಳ್ಳಿಗೆ ಅಗ್ರಹಾರವೆಂದು ಕರೆಯುವರು. ಕ್ರಿ.ಶ. ೧೧೨೭ ರ ಚಾಲುಕ್ಯರ ಶಾಸನ ಯಾವ ರಾಜನಿಗೆ ಸಂಬಂಧಪಟ್ಟಿದ್ದೆಂಬುದು ತಿಳಿಯುವುದಿಲ್ಲವಾದರೂ ಚಾಲುಕ್ಯದೊರೆಯ ಹೂವಿನಬಾಗೆಯ ಮಹಾಘಟಿಕಾಸ್ಥಾನ ಹಾಗೂ ಅಗ್ರಹಾರದ ಅಧಿಪತಿಯಾಗಿದ್ದು ಆತ, ಕೆರೆಯಲ್ಲಿನ ಕೇಶವೇಶ್ವರ ದೇವರಿಗೆ ದಾನ-ದತ್ತಿ ನೀಡಿದ ಉಲ್ಲೇಖ ಬರುವುದು.[೧೪೪]

ಅಗ್ರಹಾರಗಳು ಹೇಗೆ ಸ್ಥಾಪನೆಗೊಳ್ಳುತ್ತಿದ್ದವು ಎಂಬುದಕ್ಕೆ ನಮ್ಮ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಕುಂತಣಬಾಗೆಯ ಜಿಲ್ಲೆಯಾಗಿರತಕ್ಕಂತಹ ಬೆಳಗಾಂವ್, ದೇಗಾಂವ್ ಅಗ್ರಹಾರದ ಸ್ಥಾಪನೆಯ ವಿವರಗಳಿಂದ ನನಗೆ ತಕ್ಕಮಟ್ಟಿಗೆ ತಿಳಿದುಬರುತ್ತದೆ. ದೇಗಾಂವ್‌ನಲ್ಲಿ ಗೋವೆಯ ಕದಂಬ ಶಿವಚಿತ್ತವರ್ಮನ ರಾಣಿ ಕಮಲಾದೇವಿಗೆ ಕೊಡಬೇಕು. ಒಂದು ದಿನ ರಾಜನು ಸಭೆಯಲ್ಲಿದ್ದಾಗ ರಾಣಿ ದೇಗಾಂವ್

---

೧೪೧. ಡಾ. ಶಿ.ಬಾ. ಪಾಟೀಲ : ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ( ಪಿಎಚ್.ಡಿ. ಪ್ರಬಂಧ) [illegible] ಪು. ೧೧೫-೧೨೬.

೧೪೨. ಇನ್‌ಸ್ಕ್ರಿಪ್ಷನ್ಸ್ ಆಫ್ ನಾರ್ಥ ಕರ್ನಾಟಕ ಆ್ಯಂಡ್ ಕೊಲ್ಲಾಪುರ ಸ್ಟೇಟ್, ಸಂಪುಟ-೬, ಪು. ೧೦೯.

೧೪೩. ಬಾ.ರಾ.ಗೋಪಾಲ (ಸಂ.): ಕೆ.ಆಯ್.ಆಯ್. ಸಂಪುಟ-೫, ತೇರದಾಳ ಕ್ರಿ.ಶ. ೧೧೮೭ ರ ಶಾಸನ, ಪು. ೨೯೬.

೧೪೪. ಕ.ವಿ.ವಿ. ಶಾಸನ ಸಂಪುಟ-೬, ಹಂಪಿ, ೨೦೦೧, ಪು. ೫೮.

ಗ್ರಾಮವನ್ನು ನಾನು ಬ್ರಾಹ್ಮಣರಿಗೆ ಕೊಡಬೇಕು; ನಿಮ್ಮ ಅಭಿಪ್ರಾಯವೇನು ತಿಳಿಸಿ ಮಹಾಪ್ರಭುವೇ ಎಂದಾಗ ರಾಣಿಯ ಭಿನ್ನಹವನ್ನು ರಾಜನು ಮಂತ್ರಿಗಳ ಮುಂದೆ ಇಡುತ್ತಾನೆ. ರಾಣಿಯ ಸಲಹೆಯನ್ನು ಎಲ್ಲ ಬ್ರಾಹ್ಮಣರು ಅಭಿನಂದಿಸುತ್ತಾರೆ.[೧೪೫]

**ದೇವಸ್ಥಾನಗಳು :**

ಕರ್ನಾಟಕದ ಆಡಳಿತದ ಕ್ರಮದಲ್ಲಿ ದೇವಸ್ಥಾನದ ಆಡಳಿತ ಸ್ಥಳೀಯ ಸರ್ಕಾರದ ಒಂದು ಮುಖ್ಯ ಕೇಂದ್ರವಾಗಿತ್ತು. ದೇವಸ್ಥಾನವು ಸ್ಥಳೀಯ ಪ್ರದೇಶದಲ್ಲಿ ಮತೀಯ ಜೀವನದ ಒಂದು ಕೇಂದ್ರವಾಗಿತ್ತಲ್ಲದೇ ಅದು ಸಾಮಾಜಿಕ ಸಂಸ್ಥೆಯ ಮುಖ್ಯ ಅಂಗವಾಗಿತ್ತು. ಅದು ಪಟ್ಟಣದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಜೀವನದ ಚಟುವಟಿಕೆಗಳಲ್ಲಿ ಮುಖ್ಯ ಪಾತ್ರವನ್ನು ವಹಿಸಿತು. ಅಲ್ಲಿನ ರಾಜರುಗಳು ದಾನಗಳನ್ನು ಕೊಟ್ಟು ಅದನ್ನು ಶಾಸನ ರೂಪದಲ್ಲಿ ಬರೆಯುತ್ತಿದ್ದರು. ಇದರಿಂದ ನಾವುಗಳು ಹಿಂದಿನ ಕಾಲದ ದೇವಸ್ಥಾನದ ಆಡಳಿತಕಾರ್ಯ, ಅದರ ಅಧಿಕಾರಿಗಳು, ಖಜಾನೆ, ವ್ಯವಸಾಯ ಮತ್ತು ಪಾಂಡಿತ್ಯಕ್ಕೆ ಕೊಡುತ್ತಿದ್ದ ಪ್ರೋತ್ಸಾಹವನ್ನು ತಿಳಿಯಬಹುದಾಗಿದೆ. ದೇವಸ್ಥಾನದ ಅಧಿಕಾರವರ್ಗವು ಒಂದು ಜಮೀನ್ದಾರಿಕೆ ಹೊಂದಿದ್ದು ವ್ಯವಸಾಯದ ಹಿತವನ್ನು ಸಂರಕ್ಷಿಸುವಂತಿತ್ತು. ದೇವಸ್ಥಾನವು ಪಾಂಡಿತ್ಯಕ್ಕೆ ಪ್ರೋತ್ಸಾಹ ಕೊಡುತ್ತಿತ್ತು.[೧೪೬] ಇದಕ್ಕೆ ಉದಾಹರಣೆಯಾಗಿ ಕ್ರಿ.ಶ. ೧೧೨೭ ರ ರಾಯಭಾಗ ಶಾಸನದಿಂದ ನಾವು ತಿಳಿದುಕೊಳ್ಳಬಹುದಾಗಿದೆ.[೧೪೭] ಬೆಳಗಾವಿ ಜಿಲ್ಲೆಯ ಗೋಕಾಕದ ಮಹಾಲಿಂಗೇಶ್ವರ ದೇವಸ್ಥಾನದಲ್ಲಿಯೂ ಶಿಕ್ಷಣ ಜಾರಿಯಲ್ಲಿತ್ತು. ಘಟಿಕಾಸ್ಥಾನಗಳ ಆಚಾರ್ಯರು ಮತ್ತುಅವರ ಅನುಯಾಯಿಗಳು ರಟ್ಟರ ಆಳ್ವಿಕೆಯ ಸಂದರ್ಭದಲ್ಲಿಯೂ ತೇರದಾಳದಲ್ಲಿ ಸಭೆ ಸೇರಿ ಚರ್ಚಿಸುತ್ತಿದ್ದ ವಿಷಯವನ್ನು ಕ್ರಿ.ಶ.೧೧೨೩ ರ ಶಾಸನ ನಮಗೆ ತಿಳಿಸಿಕೊಡುತ್ತದೆ.[೧೪೮]

**ಮಠಗಳು :**

ಅನಾದಿ ಕಾಲದಲ್ಲಿಯೂ ಸಹ ಮಠಗಳು ವಿದ್ಯಾಕೇಂದ್ರಗಳಾಗಿದ್ದವು. ದೇವಸ್ಥಾನಕ್ಕೆ ಕುರಿತಂತೆ ಮಠಗಳಿದ್ದವು. ಈ ಮಠಗಳು ಧಾರ್ಮಿಕ ತತ್ವವನ್ನು ಭೋದಿಸುವ ಮತ್ತು ವಿದ್ಯಾಭ್ಯಾಸವನ್ನು ಜನಪ್ರಿಯಗೊಳಿಸುವ ಎರಡು ಮುಖ್ಯ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದವು. ಇಲ್ಲಿ ವಿದ್ಯೆಗೆ ಹೆಚ್ಚಿನ

---

೧೪೫. ಡಾ. ಜಿ.ಎಸ್.ದೀಕ್ಷಿತ್ : ಪ್ರಾಚೀನ ಕರ್ನಾಟಕದ ಶಿಕ್ಷಣಕ್ರಮ, ಧಾರವಾಡ, ೧೯೫೬, ಪು. ೨೫-೨೬.

೧೪೬. ಕೆ. ಸದಾಶಿವ : ಪ್ರಾಚೀನ ಭಾರತದ ಇತಿಹಾಸ, ಮೈಸೂರು, ೧೯೯೭, ಪು. ೫೭.

೧೪೭. ಕ.ವಿ.ವಿ. ಶಾಸನ ಸಂಪುಟ-೬, ಹಂಪಿ, ೨೦೦೧, ಪು. ೫೮.

೧೪೮. ಕೆ.ಆಯ್. ಸಂಪುಟ-೫, ಪು. ೭೫.

ಪ್ರೋತ್ಸಾಹವನ್ನು ನೀಡಲಾಗಿತ್ತು.[೧೪೯] ಕ್ರಿ.ಶ. ೧೧೨೬ ರ ರಾಯಭಾಗ ಶಾಸನದಿಂದ ಅಗ್ರಹಾರ ಮತ್ತು ಮಹಾಘಟಿಕಾಸ್ಥಾನದಿಂದ ಶಿಕ್ಷಣ ಲಭ್ಯವಾಗುತ್ತಿತ್ತು ಎಂದು ತಿಳಿದುಬರುವುದು.[೧೫೦] ಕ್ರಿ.ಶ. ೧೬ನೇ ಶತಮಾನದ ಹೊತ್ತಿಗೆ ರಾಜಕೀಯ ಅಸ್ಥಿರತೆಯಿಂದ ತನ್ನ ಕೆಲವು ಬೆಲೆಯುಳ್ಳ ಆಸ್ತಿಯನ್ನು ಕಳೆದುಕೊಳ್ಳಲು ಕಾರಣವಾಯಿತು. ಇಂದಿನ ಶತಮಾನಗಳಲ್ಲಂತೂ ಸಂಪೂರ್ಣವಾಗಿ ತಮ್ಮ ಚಾರಿತ್ರಿಕ ಸ್ವರೂಪವನ್ನು ಕಳೆದುಕೊಂಡಿವೆ. ಉದಾ : ರಾಯಭಾಗ ತಾಲೂಕಿನ ಶ್ರೀ ಯಲ್ಲಾಲಿಂಗಮಠ ಒಂದು ನಿದರ್ಶನವಾಗಿದೆ.

**ಸಾಹಿತ್ಯ :**

ಜನಜೀವನದ ಮಟ್ಟ ಮತ್ತು ಬಾಳಿನ ನಾನಾ ಮುಖಗಳನ್ನು ಸಾಹಿತ್ಯದಿಂದ ಮಾತ್ರ ತಿಳಿಯಲು ಸಾಧ್ಯ. ಜೀವನದ ಪ್ರತಿಬಿಂಬವೇ ಸಾಹಿತ್ಯ. ಇಂತಹ ಸಾಹಿತ್ಯ ಹುಟ್ಟಿದ್ದು ನಿಶ್ಚಿತವಾಗಿ ಇದೇ ಶತಮಾನದಂದು ಎಂದು ಹೇಳಲು ಸಾಧ್ಯವಾಗದ ಮಾತು. ಏಕೆಂದರೆ ಕವಿರಾಜ ಮಾರ್ಗವು ಪಂಪನಿಂದ ಈಚೆಗೆ ದೊರೆತ ಗ್ರಂಥಗಳ ಆಧಾರದ ಮೇಲೆ ಹೇಳಬಹುದಾಗಿದೆ. ಭಾಷೆಯು ಬಹಳಷ್ಟು ಪ್ರೌಢಿಮೆ ಹೊಂದಿರುವುದರಿಂದ ಕನ್ನಡ ಸಾಹಿತ್ಯ ಅದಕ್ಕಿಂತ ಬಹಳ ಶತಮಾನಗಳ ಹಿಂದೆ ಉನ್ನತ ಮಟ್ಟದಲ್ಲಿತ್ತೆಂದು ತಿಳಿದುಕೊಳ್ಳಬಹುದು.

ಪ್ರಾಚೀನ ಕನ್ನಡ ಸಾಹಿತ್ಯ ಕ್ಲಿಷ್ಟ ಶಬ್ದಗಳೊಂದಿಗೆ ಕೂಡಿದೆ. ಮಧುರ ಕವಿ ಹೇಳುವಂತೆ ಸಾಮಾನ್ಯರಿಗೆ ಅದು ಕಬ್ಬಿಣದ ಕಡಲೆ.[೧೫೧] ಕ್ರಿ.ಶ. ೧೦೨೬ ರ ರಾಯಭಾಗ ಶಾಸನವು ಇಲ್ಲಿಯ ಬ್ರಾಹ್ಮಣರು ವಾಗ್ಮಿಗಳೂ, ತ್ಯಾಗಿಗಳೂ, ಬುದ್ಧಿವಂತರು, ಗೌರವಸ್ಥರು ಹೀಗೆ ಹತ್ತು ಹಲವು ಬಗೆ ವಿವರಿಸುತ್ತದೆ.[೧೫೨] ಆಸೆಗೆಯ್ಯುವ ಫಲಗಳೆಂದರೆ ಕೀರ್ತಿ ಮತ್ತು ಲಾಭ ತನ್ನ ಗ್ರಂಥದಿಂದ ದೊರೆಯುತ್ತದೆಂದು ಪಂಪನು ತನ್ನ ಆದಿಪುರಾಣ ಉಲ್ಲೇಖಿಸಲ್ಪಟ್ಟಿದ್ದಾನೆ.[೧೫೩]

ಮುಗಳಖೋಡ ಶ್ರೀ ಯಲ್ಲಾಲಿಂಗ ಮಠವು ಪುರಾತನ ಕಾಲದಿಂದಲೂ ವಿದ್ವಾಂಸರ, ವಾಗ್ಮಿಗಳ, ವಾಕ್‌ಪಟುಗಳ, ಸಾಹಿತಿಗಳ ತಾಣವಾಗಿ ಪರಿಣಿಸಿದೆ. ಈ ಮಠದ ಮೊಟ್ಟ ಮೊದಲನೆಯ ಪಟ್ಟದೇವರು ಶ್ರೀ ಯಲ್ಲಾಲಿಂಗ ಮಹಾರಾಜರು. ಇವರ ನಂತರ ಈ ಮಠದ ಗದ್ದುಗೆ ಚುಕ್ಕಾಣಿಯಾಗಿ ಕಾಣಿಸಿಕೊಂಡವರು

---

೧೪೯. ಕೆ.ಆಯ್. ಸಂಪುಟ-೫, ಪು. ೫೮೦.

೧೫೦. ಕ.ವಿ.ವಿ. ಶಾಸನ ಸಂಪುಟ-೬, ಹಂಪಿ, ೨೦೦೧, ಪು. ೫೮.

೧೫೧. ಡಾ. ಶಿ.ಬಾ. ಪಾಟೀಲ : ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ( ಪಿಎಚ್.ಡಿ. ಪ್ರಬಂಧ) ಪು. ೧೫೮.

೧೫೨. ಕ.ವಿ.ವಿ. ಶಾಸನ ಸಂಪುಟ-೬, ಹಂಪಿ, ೨೦೦೧, ಪು. ೫೮.

೧೫೩. ಎಮ್.ಮರಿಯಪ್ಪ ಭಟ್ : ವ್ಯವಹಾರ ಗಣಿತ, ೧೯೮೦, ಮೈಸೂರು, ಪು. ೩೫.

ಶ್ರೀ ಸಿದ್ಧರಾಮೇಶ್ವರ ಮಹಾಜರಾಜರು. ಅನಂತರ ಇಂದು ಶ್ರೀ ಮುರುಘರಾಜೇಂದ್ರ ಮಹಾಸ್ವಾಮಿಗಳು ಈ ಮಠದ ರೂವಾರಿಯಾಗಿದ್ದರು. ಇದರಿಂದ ಪ್ರಾಚೀನ ಕಾಲದಿಂದ ಇಂದಿನವರೆಗೂ ಕುಂತಣಬಾಗೆ ಹಲವಾರು ಸಾಹಿತಿಗಳು, ಕವಿಗಳು, ಉಪಾಧ್ಯಾಯರು, ವಿದ್ವಾಂಸರು ಹಾಗೂ ಮಹಾಜನರಿಂದ ರಂಜನೀಯ ವಾಸಸ್ಥಾನವಾಗಿ ಹೆಸರುವಾಸಿಯಾಗಿತ್ತು. ಈ ಒಂದು ನಿಟ್ಟಿನಲ್ಲಿ ಕುಂತನಬಾಗೆಯ ಸಾಂಸ್ಕೃತಿಕ ಇತಿಹಾಸವನ್ನು ಸಂಕ್ಷಿಪ್ತವಾಗಿ ಚಿತ್ರಿಸಲ್ಪಟ್ಟಿದೆ.



## ಅಧ್ಯಾಯ : ಐದು

# ವಾಸ್ತುಶಿಲ್ಪ

ಭಾರತದ ವಾಸ್ತುಶಿಲ್ಪ ಪರಂಪರೆಯ ಕೇಂದ್ರಗಳಲ್ಲಿ ಕರ್ನಾಟಕವೂ ಒಂದು. ಗೈಮೇ ಆಗಸದತ್ತ ಕೈಯೆತ್ತಿ ತೋರುತ್ತದೆ. (ಪ್ರೊ. ನಂಜುಂಡಸ್ವಾಮಿ) ಎಂದು ಕವಿಯು ಶಿಲ್ಪಕಲೆಯ ಹಿನ್ನೆಲೆಯಲ್ಲಿ ಕೊಂಡಾಡಿದ್ದಾನೆ. ''ಬಾಗಿಲೊಳು ಕೈಮುಗಿದು ಒಳಗೆ ಬಾ ಯಾತ್ರಿಕನೇ, ಶಿಲೆಯಲ್ಲಿ ಈ ಗುಡಿಯು ಕಲೆಯ ಬಲೆಯು''[೧] ಇಂತಹ ಭಾವನೆಗಳು ಒಡಲುಕ್ಕಿ ಹೊರಹೊಮ್ಮ ಬೇಕಾದರೆ ಅದರ ಹಿಂದೆ ಒಬ್ಬ ಕಲಾತಪಸ್ವಿಯ ಕಗ್ಗಲ್ಲು ಬಂಡೆಗಳನ್ನು ಕೊರೆದು ನಯ ನಾಜೂಕುಗೊಳಿಸಿ ಹಾವ ಭಾವನೆ ಮೂಡಿಸಿ ಅವುಗಳಲ್ಲಿ ಜೀವಕಳೆ ತುಂಬಿರಬೇಕು.[೨] ರಾಷ್ಟ್ರಕೂಟ, ಬದಾಮಿ ಚಾಲುಕ್ಯರ ಆಳ್ವಿಕೆಯಿಂದ ಹಿಡಿದು ವಿಜಯನಗರ ಕಾಲದವರೆಗಿನ ಹಲವು ದೇವಾಲಯಗಳು ಜಗತ್ಪ್ರಸಿದ್ಧವಾಗಿವೆ. ಕರ್ನಾಟಕದಲ್ಲಿ ಕಂಡುಬರುವ ವಾಸ್ತುಕಲಾ ಇತಿಹಾಸವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಹಲವು ಪರಿವರ್ತನೆಯ ಕಲಾಶೈಲಿಗಳ ಹಂತಗಳು ಗೋಚರವಾಗುತ್ತವೆ. ಉದಾಹರಣೆಗೆ ಬದಾಮಿ, ಐಹೊಳೆ, ಪಟ್ಟದಕಲ್ಲು, ಬೇಲೂರು, ಹಳೇಬೀಡು, ಹಲಸಿ ಮೊದಲಾದವು. ಈ ದೇವಾಲಯಗಳು ತಮ್ಮದೇ ಆದ ವೈಶಿಷ್ಟ್ಯಪೂರ್ಣವಾದ ಲಕ್ಷಣಗಳನ್ನು ರೂಢಿಸಿಕೊಂಡು ವಿಶಿಷ್ಠ ಶೈಲಿಯೆಂದೇ ಪ್ರಸಿದ್ಧಿ ಪಡೆದಿದೆ.[೩] ದೇವಾಲಯಗಳ ಕುರಿತು ಆಳವಾದ ಅಧ್ಯಯನಗಳು ಹೊರಬಂದಿವೆ. ಕರ್ನಾಟಕದಲ್ಲಿ ನಿರ್ಮಿತವಾದ ದೇವಾಲಯವು ಹೆಚ್ಚಾಗಿ ಶಾತವಾಹನ, ಆದಿಕದಂಬ, ಬದಾಮಿ ಚಲುಕ್ಯರು, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯರು, ಕಲಚೂರಿ ಮತ್ತು ಹೊಯ್ಸಳರು, ವಿಜಯನಗರ ಕಾಲಕ್ಕೆ ಸಂಬಂಧಿಸಿವೆ.[೪] ಬೆಳಗಾಂವ್ ಪ್ರದೇಶದ ಹಲಸಿಯ ಬಸದಿ ಆದಿಕದಂಬರ ಕಾಲದ್ದಾಗಿದೆ. ನಮ್ಮ ದೇಶದಲ್ಲಿ ವಿವಿಧ ಪಂಥ ಮತ್ತು ಉಪಪಂಥಗಳು ಆಧ್ಯಾತ್ಮಿಕವಾಗಿ, ತಾತ್ವಿಕವಾಗಿ ಬೇರೆ ಬೇರೆಯಾಗಿದ್ದರೂ ಅವುಗಳು ಒಂದಾಗಿವೆ. ಈ ಸತ್ಯಾಂಶವು ದೇವಾಲಯಗಳ ವಾಸ್ತುಶಿಲ್ಪದಿಂದಲೇ ಕಂಡುಬರುತ್ತದೆ. ಪ್ರಾಚೀನ ಅವಶೇಷಗಳು ಇದರ ಕೃರ್ತಕ ಸೀಮೆಗಳನ್ನು ತಿಳಿಸಿಕೊಡುತ್ತವೆ.[೫]

---

೧. ಡಾ. ಶಿ.ಬಾ. ಪಾಟೀಲ : ಪು. ೧೧೮.
೨. ಅದೇ.
೩. ಡಾ. ರಾಜಶೇಖರ : ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಧಾರವಾಡ, ೧೯೯೮, ಪು. ೧.
೪. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೬೫.
೫. ಡಾ. ಹೆವೆಲ್, ಈ.ಟಿ. : ದಿ ಏನ್ಸಿಯಂಟ್ ಆ್ಯಂಡ್ ಮಿಡಿವಲ್ ಆರ್ಕಿಟೆಕ್ಚರ್ ಆಫ್ ಇಂಡಿಯಾ, ಲಂಡನ್, ೧೯೨೪, ಪು. ೨೧೦.

ದೇವಸ್ಥಾನದ ಹುಟ್ಟು, ಬೆಳವಣಿಗೆಯ ವಿಷಯವಾಗಿ ಡಾ. ಎ.ಎಸ್.ಅಲ್ಟೇಕರ್ ಹೇಳಿರುವ ಮಾತುಗಳನ್ನು ಗಮನಿಸಬಹುದು. ''ಮೂರ್ತಿಪೂಜೆಯ ಆರಂಭ ಮತ್ತು ಬೆಳವಣಿಗೆಗಳ ವಿಷಯವಾಗಿ ಇನ್ನೂ ಅಧ್ಯಯನ ನಡೆಯಬೇಕಿದೆ. ಮನೆಯಲ್ಲಾಗಲಿ, ದೇವಾಲಯದಲ್ಲಾಗಲಿ, ದೇವತಾ ಮೂರ್ತಿಗಳನ್ನು ಪೂಜಿಸುವ ವಿಷಯವನ್ನು ಸಾಮಾನ್ಯವಾಗಿ ಹೇಳುವುದಿಲ್ಲ. ಮನುವೂ ಹೇಳಿಲ್ಲ. ದೇವಸ್ಥಾನಗಳನ್ನು ಸ್ಥಾಪಿಸುವ ಸಂಪ್ರದಾಯವು ಅಶೋಕನಿಗಿಂತ ಇತ್ತೀಚಿನದ್ದೆಂದು ಕಾಣುತ್ತೇವೆ. ಬಹುಜನರು (ಬ್ರಾಹ್ಮಣರು) ನೆರೆಯುತ್ತಿದ್ದ ಯಜ್ಞಗಳ ಸ್ಥಾನಗಳಲ್ಲಿ ಇವು ಕಾಣಿಸಿಕೊಂಡವು. ಒಟ್ಟಾರೆ ಭವ್ಯ ದೇವಾಲಯಗಳನ್ನು, ವಿಹಾರಗಳನ್ನು ನೋಡಿದ ಹಿಂದೂಗಳ ಮನಸ್ಸಿನಲ್ಲಿ ಅಂತಹ ಸಾರ್ವಜನಿಕ ಆರಾಧನ ಕೇಂದ್ರಗಳನ್ನು ಸ್ಥಾಪಿಸಬೇಕೆಂದು ಇಚ್ಛೆ ಹುಟ್ಟಿರಬಹುದು. ಅಂತೂ ನಿಜವಾದ ಕಾರಣಗಳು ಏನೇ ಇರಲಿ ದೇವಸ್ಥಾನಗಳನ್ನು ಸಾರ್ವಜನಿಕ ಪೂಜಾಕೇಂದ್ರಗಳೆಂದು ಪರಿಗಣಿಸಲ್ಪಟ್ಟಿವೆ.[೧]

ವಾಸ್ತು ಎಂದರೆ ನಿರ್ಮಾಣವಾದುದು ಎಂಬ ಅರ್ಥವಿರುವಂತೆ ಕೇವಲ ಕಟ್ಟಡನಿರ್ಮಾಣಗಳಲ್ಲದೆ, ಪಟ್ಟಣ ಯೋಜನೆ, ಪೀಠೋಪಕರಣಗಳ ನಿರ್ಮಾಣವು ಸಹ ಈ ಪದ ಚೌಕಟ್ಟಿನಲ್ಲಿ ಒಳಪಡುತ್ತವೆ. ಆದರೆ ಮುಂದೆ ಈ ಪದದ ವ್ಯಾಪ್ತಿ ಪರಿಮಿತಿಗೊಂಡು 'ವಾಸ್ತು' ಎಂದರೆ ಕಟ್ಟಡಗಳ ನಿರ್ಮಾಣ ಮತ್ತು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥ ಬೆಳೆದು ಬಂದಿತು.[೨]

ಭಾರತದಲ್ಲಿ ಮನುಷ್ಯ ಮೊದಲು ನೈಸರ್ಗಿಕ ಸ್ಥಳಗಳನ್ನು ಅರಸಿದ (ಬಯಸಿದ). ಕ್ರಮೇಣ ಗುಡಿಸಲುಗಳ ರಚನೆ ಪ್ರಾರಂಭವಾಯಿತು. ಆದರೆ ತುಂಬಾ ಪ್ರಾಚೀನ ದೇಗುಲಗಳೆಂದರೆ ಗುಹೆಗಳೇ. ಬಂಡೆಗಳನ್ನು ಕಡಿದು, ಕೊರೆದು ಸಿದ್ಧಪಡಿಸಿದ ಗುಹೆಗಳೊಂದಿಗೆ ಬಿದಿರು, ಮರ, ಮಣ್ಣುಗಳಿಂದ ಮಂದಿರಗಳನ್ನು ನಿರ್ಮಿಸುತ್ತಿದ್ದರು.[೩]

ಈ ಕಲೆಯ ಬಗ್ಗೆ ವಿಶಾಲರೂಪದಲ್ಲಿ ಹೇಳಬೇಕಾದರೆ ಭಾರತೀಯ ಮನೋಧರ್ಮ ಆಧ್ಯಾತ್ಮಪರವಾಗಿದ್ದು, ಅದು ಕಲೆಗಳಲ್ಲಿ ವ್ಯಕ್ತವಾಗಿದೆ. ಕಲಾಕಾರ ಆದವನು ಕೇವಲ ತನ್ನ ಹೊರಗಣ್ಣಿನ ಮಾದರಿಯನ್ನು ಪ್ರತಿ ಮಾಡುವವನೂ ಅಲ್ಲ. ಅವನ ಮಾದರಿಗಳು ಮನಸ್ಸಿನ ಪ್ರತಿಮೆಗಳು

---

೧. ಎ.ಎಸ್.ಅಲ್ತೇಕರ್ : ಪು. ೨೮೯.
೨. ಡಾ. ತಿಪ್ಪೇರುದ್ರಸ್ವಾಮಿ, ಎಚ್ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ೧೯೬೮, ಪು. ೧೧.
೩. ಡಾ. ಎಸ್.ಕೆ.ರಾಮಚಂದ್ರರಾವ್ : ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ೧೯೭೫, ಪು. ೧೮.

''ಜ್ಞಾನದಿಂದಾದ ದರ್ಶನಗಳು ಈ ಜ್ಞಾನದೃಷ್ಟಿಯಿಂದಲೇ ಭಾರತದ ಕಲೆ ಸರ್ವೋಚ್ಚ ಶ್ರೇಷ್ಠ ಗುಣವುಳ್ಳದ್ದಾಗಿದೆ.''[೯]

ಶಿಲ್ಪಕಲೆಯಿಂದ ನಮಗೆ ತಿಳಿದುಬರುವುದು ಏನೆಂದರೆ ಸಂಸ್ಕೃತಿಯ ವಿಕಾಸದ ಹಂತವನ್ನು ಅದು ಪ್ರತಿಬಿಂಬಿಸುತ್ತದೆ. ರಾಷ್ಟ್ರಗಳ ಹಾಗೂ ಜನತೆಯ ಸಂಸ್ಕೃತಿ ಸಂಬಂಧವಿರುವ ಕಲೆಯು ಅದರ ರಾಜಕೀಯ ಹಾಗೂ ಸಾಮಾಜಿಕ ಬದುಕಿನಿಂದಲೇ ಕೂಡಿರುತ್ತದೆ. ''ಒಂದು ಗೊತ್ತಾದ ಜನ ಸಮೂಹದ ಸಂಸ್ಕೃತಿ ಸಮಾಜದ ಕೆಲವು ವ್ಯಕ್ತಿಗಳ ಶಕ್ತಿಯ ಫಲವಾಗಿದೆ'' ಎನ್ನಬಹುದು.[೧೦]

*''ಕಲ್ಲುನಾಡಿನ ಕಲೆಯ ಹೇಳುತ್ತಿದೆಯಲ್ಲಿ*

*ಗೈಮೇ ಆಗಸದತ್ತ ಕೈಎತ್ತಿ ತೋರುತ್ತಿದೆ''*[೧೧]

ಎಂದನೊಬ್ಬ ಕವಿಯು ಶಿಲ್ಪಕಲೆಯನ್ನು ಆಧರಿಸಿ ಕೊಂಡಾಡಿದ್ದಾನೆ. ಇಂತಹ ಭಾವನೆಗಳು ಒಡಲುಕ್ಕಿ ಹೊರಹೊಮ್ಮಬೇಕಾದರೆ ಅದರ ಹಿಂದೊಬ್ಬ ಕಲಾತಪಸ್ವಿಯು ಬಂಡೆಗಳನ್ನು ಕೊರೆತು ನಯ, ನಾಜೂಕು, ಹಾವ-ಭಾವ, ಮೂಡಿಸಿ ಅವುಗಳಲ್ಲಿ ಜೀವಕಳೆ ತುಂಬಿಸಿರಲು ಸಾಧ್ಯತೆಯಿದೆ.[೧೨] ಹಿಂದೂಗಳು ದೇವಾಲಯಗಳೆಂದು ಕರೆದರೆ, ಜೈನರು ಬಸದಿಯೆಂದೂ ಕರೆಯುವಂತೆ, ಬೌದ್ಧರು ಚೈತ್ಯ, ಮುಸ್ಲಿಂ ಮಸೀದಿಯೆಂದು ಕರೆದರು.[೧೩]

ಕಲಾಕಾರನ ಮಾದರಿಗಳು ಮನಸ್ಸಿನ ಪ್ರತಿಮೆಗಳು ಧ್ಯಾನದಿಂದ ದರ್ಶನಗಳು ಈ ಧ್ಯಾನ ದೃಷ್ಟಿಯಿಂದಲೇ ಭಾರತೀಯ ಕಲೆ ಸರ್ವೋಚ್ಚ ಶ್ರೇಷ್ಠ ಗುಣವುಳ್ಳದ್ದಾಗಿದೆ.[೧೪] ಕಲೆಯ ಬಗ್ಗೆ ಹೇಳಬೇಕಾದರೆ ಭಾರತೀಯ ಮನೋಧರ್ಮ ಆಧ್ಯಾತ್ಮಪರವಾದದ್ದು. ಅದು ಅವರ ಕಲೆಗಳಲ್ಲಿ ವ್ಯಕ್ತವಾಗಿದೆ. ಭಾರತೀಯ ಜೀವನಧರ್ಮ, ಸಂಸ್ಕೃತಿಗಳನ್ನೇ, ಆ ಲಲಿತಕಲೆಗಳು ಕಾಣಿಸಿದೆ. ಅನನ್ಯವಾದ ಮಾರ್ಗವೊಂದನ್ನು ರೂಪಿಸಿದೆ.[೧೫] ಶಿಲ್ಪಕಲೆಯಿಂದ ಜನಸಮೂಹ ದೃಷ್ಟಿಯಿಂದ ತಿಳಿದುಬರುವುದೇನೆಂದರೆ ಸಂಸ್ಕೃತಿಯ ವಿಕಾಸದ ಹಂತವನ್ನು ಪ್ರತಿಬಿಂಬಿಸುತ್ತದೆ. ರಾಷ್ಟ್ರದ ಹಾಗೂ ಜನತೆಯ ಸಂಸ್ಕೃತಿ ಸಂಬಂಧವಿರುವ ಕಲೆಯೂ ಅದರ

---

೯. ಡಾ. ಶಿ.ಬಾ. ಪಾಟೀಲ: ಪು. ೧೧೯.

೧೦. ಅದೇ, ಪು. ೧೧೯-೧೨೦.

೧೧. ಪ್ರೊ. ನಂಜುಂಡಸ್ವಾಮಿ: ಗೌರವ ತಪಸ್ವಿ, ಧಾರವಾಡ, ೧೯೬೭, ಪು. ೧೬.

೧೨. ಡಾ. ಹಾ.ಮಾ.ನಾಯಕ: (ಸಂ.): ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೪, ಬೆಂಗಳೂರು, ೧೯೭೫, ಪು. ೧೯೩.

೧೩. ಡಾ. ಕೂ.ಸ. ಅಪರ್ಣ: ದೇವಾಲಯಗಳ ವಾಸ್ತುಶಿಲ್ಪ ಪರಿಚಯ, ಹಂಪಿ, ೧೯೯೭, ಪು. ೭.

೧೪. ಇಂಡಿಯನ್ ಆರ್ಟ್ ಯಸ್ಟಾರ್ಟ್ ಇಂಟ್ರ್ಯುಡಕ್ಷನ್, ಪು. ೭.

೧೫. ಡಾ. ಎಮ್. ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೯೧.

ರಾಜಕೀಯ ಸಮಾಜದ ಬುನಾದಿಯಿಂದಲೇ ಕೂಡಿರುತ್ತದೆ. ಮತ್ತು ಒಂದು ಗೊತ್ತುಪಡಿಸಿದ ಜನಸಮೂಹದ ಸಂಸ್ಕೃತಿ ಸಮಾಜದ ಕೆಲವು ವ್ಯಕ್ತಿಗಳ ಶಕ್ತಿಯ ಫಲವಾಗಿದೆ.[೧೬]

ಧಾರ್ಮಿಕ ಕಲ್ಪನೆ ಮತ್ತು ದೈವತ್ವದಲ್ಲಿ ನಂಬಿಕೆಯನ್ನು ಹೊಂದಿದ್ದ ಭಾರತೀಯರು ಭಾರತದ ತುಂಬೆಲ್ಲಾ ವೈವಿಧ್ಯಮಯವಾದ ದೇವಾಲಯಗಳನ್ನು ನಿರ್ಮಾಣ ಮಾಡಿದರು. ಈ ದೇವಾಲಯಗಳು ಕೇವಲ ಧಾರ್ಮಿಕ ಕುರುಹುಗಳಾಗಿರದೇ ಪ್ರಾಚೀನ ಸಾಂಸ್ಕೃತಿಕ ಕೇಂದ್ರಗಳಾಗಿವೆ. ವಿಶ್ವದ ಯಾವುದೇ ಭಾಗದಲ್ಲಿ ಕಂಡುಬರದೇ ಇರುವಂತಹ ದೇವಾಲಯಗಳು ಭಾರತದಲ್ಲಿವೆ. ಇದು ಹೆಮ್ಮೆಯ ಸಂಗತಿಯಾಗಿದೆ. ಇವುಗಳು ಅಂದಿನ ಕಾಲದ ಕಲೆಯ ಅಭಿವೃದ್ಧಿಗಾಗಿ ನೀಡಿದ ಪ್ರೇರಣೆ ರೂವಾರಿಗಳ ಕೈಚಳಕ ಮತ್ತು ಕಲಾನೈಪುಣ್ಯತೆಯ ಮಹಿಮೆಯನ್ನು ಇಂದಿನ ಜನತೆಗೆ ಸಾರಿ ಹೇಳುವ ಜೀವಂತ ಸಾಕ್ಷಿಗಳಾಗಿವೆ.[೧೭]

**ಕುಂತಣಬಾಗೆಯ ದೇವಾಲಯಗಳು :**

**ಸಿದ್ಧೇಶ್ವರ ದೇವಾಲಯ :**

| | | |
|---|---|---|
| ಸ್ಥಳ | : | ರಾಯಬಾಗ |
| ದೇವಾಲಯ | : | ಸಿದ್ಧೇಶ್ವರ ದೇವಾಲಯ |
| ತಾಲೂಕ | : | ರಾಯಬಾಗ |
| ದಿಕ್ಕು | : | ಪಶ್ಚಿಮ |
| ಕಟ್ಟಡ ಮಾಧ್ಯಮ | : | ಕಪ್ಪುಶಿಲೆ |
| ಶೈಲಿ | : | ಕಲ್ಯಾಣಿ ಚಾಲುಕ್ಯ |
| ಸ್ಥಿತಿ | : | ಸುಸ್ಥಿತಿಯಲ್ಲಿದೆ |

**ಗರ್ಭಗೃಹ :** ಸಿದ್ದೇಶ್ವರ ದೇವಾಲಯವು ಮುಖ್ಯವಾಗಿ ಗರ್ಭಗೃಹ, ಅಂತರಾಳ ಮತ್ತು ನವರಂಗ ಅದರ ಜೊತೆಗೆ ವಿಶಾಲವಾದ ಪ್ರಾಂಗಣವನ್ನು ಕಾಣಬಹುದು. ಕ್ರಿ.ಶ. ೧೪ನೇ ಶತಮಾನದಿಂದ ೧೯ನೆಯ ಶತಮಾನದವರೆಗಿನ ದೇವಾಲಯವು ಶ್ರೇಣಿ ಮತ್ತು ಒಳಿತುಗಳನ್ನು ಒಳಗೊಂಡಿದೆ. ಮಧ್ಯಭಾಗದಲ್ಲಿ ವೀರಭದ್ರ ವಿಗ್ರಹವನ್ನು ಪ್ರಸ್ತುತವಾಗಿ ಪ್ರತಿಷ್ಠಾಪಿಸಲಾಗಿದೆ.

---

೧೬. ಭೂಪೇಂದ್ರ ಗುಪ್ತಾ : ಇಂಡಿಯನ್ ಆಟ್ ಇನ್ ರಿಲೇಶನ್ ಟು ಕಲ್ಚರ್, ಪು. ೨.
೧೭. ಡಾ. ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೯೧.

**ಅಂತರಾಳ :** ಅಂತರಾಳವು ಚಿಕ್ಕ ಕೊಠಡಿಯಿಂದ ಕೂಡಿದೆ. ಇದು ಕಲ್ಯಾಣಿ ಚಾಲುಕ್ಯರ ಶೈಲಿಯಲ್ಲಿ ನಿರ್ಮಿತವಾದ ದೇವಸ್ಥಾನವಾಗಿದೆ. ಈ ನಿಟ್ಟಿನಲ್ಲಿ ಹೇಳಬಹುದಾದ ಸಂಗತಿ ಏನೆಂದರೆ ಚಾಲುಕ್ಯರ, ಕಲ್ಯಾಣಿ ಚಾಲುಕ್ಯರು, ರಾಷ್ಟ್ರಕೂಟರು ಹೀಗೆ ಮುಂತಾದ ರಾಜಕೀಯ ಮನೆತನಗಳು ಉದಯಿಸಿ ತಮ್ಮ ದಪಿ ಆದಂತಹ ವಂಶವನ್ನು ಸೃಷ್ಟಿಸಲು ಮುಂದಾದರು.[೧೮]

**ನವರಂಗ :** ಅಂತರಾಳಕ್ಕೆ ಹೊಂದಿಕೊಂಡಿರುವಷ್ಟೇ ವಿಶಾಲವಾದ ಚೌಕಾಕಾರದ ನವರಂಗವಿದ್ದು, ಮಧ್ಯದಲ್ಲಿ ಬೃಹದಾಕಾರದ ನಂದಿಯಿದೆ. ಈ ನಂದಿಯು ಎರಡು ಘಂಟಾಶಾಲೆಗಳನ್ನು ಕಾಣಬಹುದಾಗಿದೆ. ತನ್ನೆರಡು ಮುಂಭಾಗದ ಕಾಲುಗಳನ್ನು ಮಂಡಿಯೂರಿ ಕುಳಿತುಕೊಂಡಿದೆ. ಈ ನವರಂಗದ ಎಡಭಾಗದ ದೇವಕೋಷ್ಠಕದಲ್ಲಿ ಗಣಪತಿ ಮತ್ತು ನಾಗದೇವತೆಗಳು ಕಂಡುಬರುತ್ತವೆ.

**ಅಧಿಷ್ಠಾನ :** ಈ ದೇವಾಲಯದ ಅಧಿಷ್ಠಾನವು ಸರಳ ಹಾಗೂ ನಿರಾಲಂಕೃತವಾಗಿದ್ದು ಇದರಲ್ಲಿ ಉಪಾನ, ಜಗತಿಗಳು, ಕಪೋತ ಕಂಡುಬರುತ್ತವೆ.

**ಭಿತ್ತಿ (ಗೋಡೆ) :** ಗೋಡೆಗಳು ಚೌಕಾಕಾರವಾಗಿದ್ದು ಸರಳ ಸಾಧಾರಣ ನಿರಾಲಂಕೃತವಾಗಿವೆ. ದೇವಾಲಯ ಪ್ರಾಂಗಣವು ವಿಶಾಲತೆಯಿಂದ ಕೂಡಿದೆ.

ಈ ದೇವರ ಜಾತ್ರೆಯು ಪ್ರತಿವರ್ಷ ಶ್ರಾವಣ ಮಾಸದ ಕೊನೆಯ ಸೋಮವಾರದಂದು ಜರುಗುತ್ತದೆ. ಇದು ಇಂದಿಗೂ ರೂಢಿಯಲ್ಲಿದೆ.[೧೯]

**ಬಂಕನಾಥ ದೇವಾಲಯ :**

| | | |
|---|---|---|
| ಸ್ಥಳ | : | ರಾಯಬಾಗ |
| ದೇವಾಲಯ | : | ಬಂಕನಾಥ ದೇವಾಲಯ |
| ತಾಲೂಕ | : | ರಾಯಬಾಗ |
| ದಿಕ್ಕು | : | ಪೂರ್ವ |
| ಕಟ್ಟಡ ಮಾಧ್ಯಮ | : | ಕಪ್ಪುಶಿಲೆ |

---

೧೮. ಡಾ. ಕರುವಿನಕೊಪ್ಪ : ಭಾರತೀಯ ಸಾಂಸ್ಕೃತಿಕ ದರ್ಶನ, ಕಾಗವಾಡ, ೧೯೯೫, ಪು. ೨೧.
೧೯. ಶಿ.ಬಾ.ಪಾಟೀಲ: ರಟ್ಟರ ಕಾಲದ ಸಂಸ್ಕೃತಿಕ ಅಧ್ಯಯನ, ಪು. ೨೫.

ಸಂಪ್ರದಾಯ : ಶೈವ

ಶೈಲಿ : ಕಲ್ಯಾಣಿ ಚಾಲುಕ್ಯ

ಸ್ಥಿತಿ : ಸುಸ್ಥಿತಿ

ಬಂಕನಾಥ ದೇವಾಲಯದ ಮುಖ್ಯ ದ್ವಾರದಲ್ಲಿ ಕಿರಿದಾದ ದ್ವಾರಗಳನ್ನು ಕಾಣಬಹುದಾಗಿದೆ. ಮುಖ್ಯ ಗರ್ಭಗೃಹದ ಪ್ರವೇಶದ್ವಾರದ ಲಲಾಟದಲ್ಲಿ 'ಓಂ' ಲಾಂಛನವನ್ನು ಕಾಣಬಹುದಾಗಿದೆ. ಅದರ ಮೇಲ್ಭಾಗದಲ್ಲಿ ಗಣೇಶ ಪ್ರತಿಮೆಯನ್ನು ಕಾಣಬಹುದಾಗಿದೆ. ನವರಂಗದಲ್ಲಿ ಮುಖ್ಯವಾಗಿ ನಾಲ್ಕು ಸ್ತಂಭಗಳು ಕಾಣಸಿಗುತ್ತವೆ. ಮೊದಲನೆಯ ಸ್ತಂಭ ಗರ್ಭಗೃಹದ ಪ್ರವೇಶದ್ವಾರದ ಎಡಭಾಗದಲ್ಲಿದ್ದು, ಈ ಸ್ತಂಭದ ಪೀಠಭಾಗದಲ್ಲಿ ದೇವಾಲಯಕ್ಕೆ ದೇಣಿಗೆಯನ್ನು ನೀಡಿದವರ ಉಲ್ಲೇಖ ನಾವು ನೋಡಬಹುದಾಗಿದೆ. ಈ ರೀತಿ ದೇವಾಲಯದ ಭಾಗಗಳಲ್ಲಿ ಒಬ್ಬ ವ್ಯಕ್ತಿಯ ಹೆಸರಿಗೋಸ್ಕರ ಬರೆಸುವಂತಹ ಈ ಪದ್ಧತಿ ದುರದೃಷ್ಟಕರ.

ನವರಂಗದ ಮಧ್ಯದಲ್ಲಿ ಪಾದಕಟ್ಟೆಯು ಕಂಡುಬರುತ್ತದೆ. ನವರಂಗದ ಎಡಭಾಗದ ದೇವಕೋಷ್ಟಕದಲ್ಲಿ ನಾಗ, ಗಣೇಶ ಪ್ರತಿಮೆಗಳು ಕಂಡುಬರುತ್ತವೆ. ಈ ದೇವಾಲಯವು ಬಹುಮಾಳಿಗೆಯಿಂದ ಕೂಡಿದೆ. ಶಿಖರ ಕದಂಬನಾಗರ ಶೈಲಿಯಲ್ಲಿದೆ. ಸುತ್ತಲೂ ರಕ್ಷಕ ಗೋಡೆಯನ್ನು ನಿರ್ಮಿಸಲಾಗಿದೆ. ಒಟ್ಟಿಗೆ ಈ ದೇವಾಲಯವು ರಾಯಭಾಗ ಊರಿನ ಮಧ್ಯದಲ್ಲಿ ಇಂದಿಗೂ ಕಂಗೊಳಿಸುತ್ತದೆ.

**ನರಸಿಂಹ ದೇವಾಲಯ :**

ಸ್ಥಳ : ರಾಯಬಾಗ

ದೇವಾಲಯ : ನರಸಿಂಹ ದೇವಾಲಯ

ತಾಲೂಕ : ರಾಯಬಾಗ

ಕಟ್ಟಡ ಮಾಧ್ಯಮ : ಕಪ್ಪುಶಿಲೆ

ಸಂಪ್ರದಾಯ : ವೈಷ್ಣವ

ಶೈಲಿ : ಕಲ್ಯಾಣಿ ಚಾಲುಕ್ಯ

ಸ್ಥಿತಿ : ಸುಸ್ಥಿತಿ

ಕೊಸ್ತಿಗಲ್ಲಿಯಲ್ಲಿರುವ ತೀರತಗ್ಗು ಪ್ರದೇಶದಲ್ಲಿದ್ದು, ನವರಂಗಕ್ಕೆ ಹೋಗಬೇಕಾದರೆ ಇಕ್ಕಟ್ಟಾದ ದಾರಿಯಿದೆ. ನವರಂಗ ವಿಶಾಲವಾಗಿದ್ದು, ಮೂಲವಿಗ್ರಹ ಚಾಲುಕ್ಯ ಶೈಲಿಯಲ್ಲಿದೆ. ವಿಗ್ರಹ ಜಲಾಲಪುರದಲ್ಲಿ ದೊರೆತದ್ದೆಂದು ಪ್ರತೀತಿಯಿದ್ದು, ದೇವಾಲಯಕ್ಕೆ ಪ್ರದಕ್ಷಿಣಾ ಪಥವಿದೆ. ಗರ್ಭಗೃಹದ ತೊಲೆ ಮೇಲೆ ಪೌರಾಣಿಕ ಮತ್ತು ವಿಷ್ಣು, ಸೂರ್ಯ, ಶೇಷಶಯನ, ಆಂಜನೇಯ ಇತರ ಶಿಲ್ಪಗಳಿವೆ. ಪಂತಬಾಳೆಕುಂದ್ರಿಯ ಮಹಾರಾಜರ ವಿವಾಹ ಶಕ ೧೮೦೪ ರಲ್ಲಿ ಇಲ್ಲಿಯೇ ನಡೆದ ಬಗ್ಗೆ ದಾಖಲೆಗಳಿವೆ.

**ಹನುಮಂತ ದೇವಾಲಯ :**

| | | |
|---|---|---|
| ಸ್ಥಳ | : | ರಾಯಬಾಗ |
| ದೇವಾಲಯ | : | ಹನುಮಂತ ದೇವಾಲಯ |
| ತಾಲೂಕ | : | ರಾಯಬಾಗ |
| ದಿಕ್ಕು | : | ದಕ್ಷಿಣಾಭಿಮುಖ |
| ಕಟ್ಟಡ ಮಾಧ್ಯಮ | : | ಕಾಂಕ್ರೀಟ್ |
| ಸ್ಥಿತಿ | : | ಸುಸ್ಥಿತಿ |

ಬಸ್‌ನಿಲ್ದಾಣದ ಬಳಿ ನಿರ್ಮಾಣಗೊಂಡ ಇತ್ತೀಚಿನ ದೇವಾಲಯ ಇದಾಗಿದ್ದು, ವಿಶಾಲವಾಗಿದ್ದು ಕಾಂಕ್ರೀಟ್ ಬಳಸಿ ನಿರ್ಮಿಸಲಾಗಿದೆ. ಚಾಲುಕ್ಯರ ಅವಧಿಯ ಬೃಹತ್ ಕಂಬಗಳಿದ್ದು ದೇವಾಲಯದ ಎದುರು ಹಳೆಯ ಕಟ್ಟಡದ ಅವಶೇಷಗಳು ಚೆಲ್ಲಾಡಿವೆ. ಸಮೀಪದಲ್ಲಿ ವಿಠ್ಠಲ ಮಂದಿರವಿದ್ದು ೧೯೬೧ ರಲ್ಲಿ ಅಗೆದು ತೆಗೆದ ಆಕರ್ಷಕವಾದ ಕಾಳಿಕಾವಿಗ್ರಹವನ್ನು ಅಲ್ಲಿ ಪ್ರತಿಷ್ಠಾಪಿಸಲಾಗಿದೆ.

**ದರ್ಗಾ (ಲಂಗೋಟಿ ಬಾಬಾ) :**

ಈ ದರ್ಗಾವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ವಾಸ್ತವಿಕ ಕುಂತನಬಾಗೆಯಲ್ಲಿ ಮುಸ್ಲಿಂ ಜನಸಮುದಾಯವನ್ನು ಕಾಣಬಹುದಾಗಿದೆ. ಈ ದರ್ಗಾ ರಾಯಭಾಗ ಬಸ್‌ನಿಲ್ದಾಣದ ಎಡಭಾಗದಲ್ಲಿ ಜಲಾಲಪೂರ ರಸ್ತೆ ಮಾರ್ಗಕ್ಕೆ ಹೊಂದಿಕೊಂಡಂತೆ ನಿರ್ಮಾಣವಾಗಿದೆ. ಮುಖ್ಯವಾಗಿ ಕುಂತನಬಾಗೆಯಲ್ಲಿ ಎರಡು ಐತಿಹಾಸಿಕ ದರ್ಗಾಗಳನ್ನು ಕಾಣಬಹುದಾಗಿದೆ. ಶಹಾಬುದ್ದೀನ್ ಚಿಸ್ತಿಯ ಒಂದು ದರ್ಗಾ ಇದೆ.

ಈತನ ಇನ್ನೊಂದು ಲಂಗೋಟಿ ವಾಲಿಯೆಂದು ಜನರೂಢವಾಗಿ ಪರಿಣಾಮವಾಗಿ ಈ ದರ್ಗಾಕ್ಕೆ 'ಲಂಗೋಟಿ ಬಾಬಾ' ಎಂದೇ ಕರೆಯಲ್ಪಟ್ಟಿದೆ. ಇನ್ನೊಂದು ದರ್ಗಾ ಎಂದರೆ ಹುಕ್ಕೇರಿ ಪೀರನ ದರ್ಗಾ.[೨೦]

ರಣದುಲ್ಲಾನ ನಂತರ ಹೆಸರಿನ ಜಾಮ್ಮಿಯಾ ಮಸೀದಿಯಲ್ಲಿ ಅರೇಬಿಕ್ ಲಿಪಿ ಶಾಸನ (ಕ್ರಿ.ಶ. ೧೯೨೯) ವಿಜಾಪುರ ಅಧಿಕಾರ ಅಮೀನ ಮೂಸಾಫಖಾನನು ಈ ಮಸೀದಿಯನ್ನು ಕಟ್ಟಿಸಿದ ಬಗೆಗೆ ಉಲ್ಲೇಖ ನಮಗೆ ಕಾಣಬಯಸುತ್ತವೆ. ಈ ಮಸೀದಿಯ ಮಧ್ಯಭಾಗದ ಬುರಜು, ಮುಂಭಾಗದಲ್ಲಿ ಎರಡು ಮಿನಾರಗಳಿವೆ. (ಕಮಾನು) ಇವು ಅಲಂಕಾರವುಳ್ಳವುಗಳಾಗಿವೆ. ಒಟ್ಟಿನಲ್ಲಿ ಇಂದಿಗೂ ಕುಂತನಬಾಗೆಯಲ್ಲಿ ಎಲ್ಲರ ಭಾತೃತ್ವದ ನೆಲೆಯಾಗಿ ಪರಿಣಮಿಸಲ್ಪಟ್ಟಿದೆ. ಈ ದರ್ಗಾದ 'ಉರುಸು' ಐದು ದನಿಗಳ ಕಾಲ ವಿಜೃಂಭಣೆಯಿಂದ ಜರುಗುತ್ತದೆ. ಈ ಉರುಸನ್ನು ಕೇವಲ ಮುಸ್ಲಿಂಮರಷ್ಟೇ ಆಚರಿಸುವುದಿಲ್ಲ. ನಿಜಕ್ಕು ಹೇಳಬೇಕಾದ ಸಂಗತಿಯೆಂದರೆ ಹಿಂದೂಗಳೇ ಈ ಒಂದು ಉರುಸನ್ನು ಮುಸ್ಲಿಮರಿಗಿಂತ ವಿಜೃಂಭಣೆಯಿಂದ ಐದು ದಿನಗಳ ಕಾಲ ಅದ್ದೂರಿಯಾಗಿ ನೆರವೇರಿಸುತ್ತಾರೆ. ಆಯಾ ಜಾತಿ, ಪಂಗಡ ಎನ್ನದೇ ಈ ಒಂದು ಉತ್ಸಾಹದಲ್ಲಿ ಸರ್ವ ಧರ್ಮಗಳ ಸಮನ್ವಯವನ್ನು ಸ್ಪಷ್ಟವಾಗಿ ಕಾಣುತ್ತೇವೆ. ಇದೇ ನಿಟ್ಟಿನಲ್ಲಿ ರಾಯಭಾಗ ಪ್ರದೇಶದಲ್ಲಿ (ಮೊರಬ, ದಿಲಜಿ, ಅಳಗೂಚಿ) ಹೀಗೆ ಮುಂತಾದ ಸ್ಥಳಗಳಲ್ಲಿ ನಾವು ಉರುಸುಗಳು ಅದ್ದೂರಿಯಾಗಿ ನಡೆಯುವುದನ್ನು ಗಮನಿಸಬಹುದಾದ ಸಂಗತಿಯೂ ಹೌದು.

**ಕುಂತಣಬಾಗೆಯ ಬಸದಿಗಳು :**

ಜನಜೀವನದ ಸ್ವರೂಪಕ್ಕೆ ಧರ್ಮವೇ ನಿರ್ಣಾಯಕ ಶಕ್ತಿಯಂತೆ ಇತ್ತು. ಧರ್ಮವನ್ನು ತನ್ನ ಜೀವನ ಎಲ್ಲ ಕ್ಷೇತ್ರಗಳಲ್ಲಿಯೂ ಧರ್ಮವೇ ಹಾಸುಹೊಕ್ಕಾಗಿ ಪರಿಣಮಿಸಿತ್ತು. ಊರಲ್ಲಿಯ ಎಲ್ಲ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ರಮಗಳ ಕೇಂದ್ರಬಿಂದುಗಳಾದ ಮಠಗಳು, ಬಸದಿಗಳು ಇವುಗಳ ನಿರ್ಮಾಣ ಹಾಗೂ ಜೀರ್ಣೋದ್ಧಾರ, ''ದೇವರ ಅಂಗಭೋಗಕ್ಕೆ, ರಂಗಭೋಗಕ್ಕೆ ಸೋಡಶಂಗೆ ನಿರ್ಮಾಣ ಹಾಗೂ ಜೀರ್ಣೋದ್ಧಾರ.''[೨೧]

ಗಂಗವಂಶ ಸ್ಥಾಪನೆಯು ಕ್ರಿ.ಶ. ೨ನೇ ಶತಮಾನದಲ್ಲಿ ಜೈನ ಯತಿಗಳಾದ ಶಿವನಂದಿಯಿಂದ ಮಾಡಲ್ಪಟ್ಟಿತ್ತು. ಜಿನನಿಂದ ಬೋಧಿಸಲಾದ ಧರ್ಮವೇ ಜೈನಧರ್ಮ. ಜಿನ ಜಯಿಸಿದವನು. ಜಿನನು ಅವತಾರಿ ಅಲ್ಲ. ತನ್ನ ಸ್ವಂತ ಬಲದಿಂದ, ಕ್ರೋಧಾಧಿ ವಿಕಾರಗಳನ್ನು ಜಯಿಸಿ ಜಿನನಾದನು.[೨೨]

---

೨೦. ಶಿ.ಬಾ.ಪಾಟೀಲ: ಪು. ೨೫.
೨೧. ಶಿ.ಬಾ.ಪಾಟೀಲ: ಪು. ೬೬.
೨೨. ಬಿ.ಸಿ.ಭಟ್ಟಾಚಾರ್ಯ: ದಿ ರೂಪಮಂಡಕ, ಪು. ೧೭.

ಇಂತಹ ಜೈನಧರ್ಮ ಪ್ರಾಚೀನ ಕಾಲದಲ್ಲಿ ಒಂದು ಪ್ರಬಲವಾದ ಧರ್ಮವಾಗಿತ್ತು. ಕ್ರಿ.ಶ. ೩ನೇ ಶತಮಾನದಿಂದಲೂ ಜೈನಧರ್ಮವು ಕರ್ನಾಟಕದಲ್ಲಿತ್ತು ಎನ್ನುವುದಕ್ಕೆ ಶಾಸನಗಳಿಂದ ತಿಳಿದುಬರುತ್ತದೆ. ಇಂತಹ ಜೈನಧರ್ಮವು ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಕಾಣಬಹುದಾಗಿದೆ. ವಾಸ್ತವವಾಗಿ ಕುಂತನಬಾಗೆಯಲ್ಲಿ ಮುಖ್ಯ ಎರಡು ಅರ್ವಾಚೀನ ಜೈನಬಸದಿಗಳು ಇಂದಿಗೂ ಕಾಣಬಹುದಾದ ಸಂಗತಿ. ಅವುಗಳೆಂದರೆ ಪಾರ್ಶ್ವನಾಥ ಬಸದಿ ಮತ್ತು ಸೋಮನಾಥ ಬಸದಿ.

**ಪಾರ್ಶ್ವನಾಥ ಬಸದಿ (ಸು. ಕ್ರಿ.ಶ. ೧೧೨೭):**

ಸಾಮಾನ್ಯವಾಗಿ ಚಾಲುಕ್ಯರು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ದೇವಾಲಯಗಳಲ್ಲಿ ನಾಲ್ಕು ಭಾಗಗಳನ್ನು ಮಾಡುತ್ತಿದ್ದರು. ಇದೇ ನಿಟ್ಟಿನಲ್ಲಿ ರಾಯಭಾಗದ ಪ್ರಾಚೀನ ಕಾಲದಲ್ಲಿ ನಿರ್ಮಿತವಾದ ಮಠ-ಮಂದಿರಗಳು ಚಾಲುಕ್ಯ ಶೈಲಿಯಲ್ಲಿಯೇ ಇವೆ. ಈ ಪ್ರಕಾರ ಪಾರ್ಶ್ವನಾಥ ಬಸದಿಯು ಚಾಲುಕ್ಯ ಶೈಲಿಯ ಉದಾಹರಣೆಗೆ ಒಂದು ಪ್ರತೀಕವಾಗಿದೆ.

ಈ ಬಸದಿಯು ೧. ಗರ್ಭಗೃಹ ಅದರ ಮೇಲೆ ಗೋಪುರ, ೨. ಸುಖನಾಸ (ಅಂತರಾಳ) ೩. ನವರಂಗ, ೪. ಮುಖಮಂಟಪ ಹೀಗೆ ಇತ್ಯಾದಿ ಮಾದರಿಗಳನ್ನು ಒಳಗೊಂಡಿದೆ.

**ಗರ್ಭಗೃಹ :** ಬಸದಿಯ ಗರ್ಭಗುಡಿಯಲ್ಲಿ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವ ಪಾರ್ಶ್ವನಾಥ ವಿಗ್ರಹವೂ ಬಹು ಸುಂದರವಾಗಿದೆ. ಗರ್ಭಗುಡಿಯ ಪ್ರವೇಶದ್ವಾರದ ಸುಂದರವಾದ ಚಿತ್ರಗಳಿಂದ ಕೂಡಿದೆ. ಸುಖನಾಸಿಯಲ್ಲಿ ಭಕ್ತರು ನಿಂತು ದೇವರ ಸೇವೆಯನ್ನು ಮಾಡುತ್ತಿರುವ ಶಿಲ್ಪ ನಮಗೆ ಗೋಚರವಾಗುತ್ತದೆ.

ಭವ್ಯವಾದ ರಂಗಮಂಟಪವು ಸುಂದರವಾದ ನಾಲ್ಕು ಕಂಬಗಳಿಂದ ಕೂಡಿದೆ. ಉಳಿದ ಗೋಡೆಯಲ್ಲಿ ಹನ್ನೆರಡು ಅರ್ಧಕಂಬಗಳು ಕಾಣುಸಿಗುತ್ತವೆ. ಬಸದಿಯ ಬಲಭಾಗದ ಹೊರಗೋಡೆಯಲ್ಲಿ ರಟ್ಟದೊರೆ ಕಾರ್ತವೀರ್ಯನ ಶಾಸನವಿದೆ. (ಕ್ರಿ.ಶ. ೧೧೨೭) ಈ ನಿಟ್ಟಿನಲ್ಲಿ ಬಸದಿಯು ಪ್ರಾಚೀನತೆಯನ್ನು ಪಡೆದುಕೊಂಡಿದೆ.

**ಸೋಮನಾಥ ದೇವಾಲಯ :**

ಈ ದೇವಾಲಯವು ಚಾಲುಕ್ಯ ಶೈಲಿಯಲ್ಲಿದ್ದರೂ ಹೊಯ್ಸಳರ ಶೈಲಿ ವಿಸ್ತಾರವಾದ ರೀತಿಯನ್ನು ತಿಳಿಸಿಕೊಡುತ್ತದೆ. ಇತ್ತೀಚೆಗೆ ಗರ್ಭಗುಡಯ ಮೇಲೆ ಶಿಖರವನ್ನು ನಿರ್ಮಿಸಲಾಗಿದೆ. ಗರ್ಭಗುಡಿಯಲ್ಲಿ ಈಶ್ವರ ಲಿಂಗವಿದ್ದು ಗರ್ಭಗುಡಿಯ ಪ್ರವೇಶದ್ವಾರದ ಸುಂದರವಾದ ಕೆತ್ತನೆಗಳಿಂದ ರೂಪಿತವಾಗಿದೆ.

ಬೆಳಗಾಂವಿಯ ಕಮಲ ಬಸ್ತಿಯಂತೆ ಇಳಿಜಾರದಂತಿದೆ. ಮುಖಮಂಟಪ ಸುಖಾಸನವಿದ್ದು ಅದರ ಹಿಂಭಾಗದಲ್ಲಿ ಉತ್ತಮ ಕಲಾಕೃತಿಯುಳ್ಳ ಶಿಲ್ಪಗಳು ಕಂಡುಬರುತ್ತವೆ. ಅದರಲ್ಲಿ ಮಹತ್ವಪೂರ್ಣ ಶಿಲ್ಪವೆಂದರೆ ಆಸನದ ಹಿಂಬದಿಯ ಎಡಪಕ್ಕದಲ್ಲೊಂದು ಒಂದು ತಲೆ ಮೂರು ದಡದ ಮೂರ್ತಿ ಜನರನ್ನು ಆಕರ್ಷಣೆಗೆ ಒಳಪಡಿಸುತ್ತದೆ.[೨೩]

**ಮಹಾವೀರ (ಗಡದ) ಬಸದಿ :**

ಚಾಲುಕ್ಯರ ಕಾಲದ ಗಡದ ಬಸದಿ (ಮಹಾವೀರ) ರಾಯಬಾಗ ಬೆಂಚಲಿಯ ಮಾರ್ಗಮಧ್ಯದಲ್ಲಿದೆ. ಒಟ್ಟಿನಲ್ಲಿ ಹೇಳಬೇಕಾದರೆ ಈ ರಸ್ತೆಯ ಪೂರ್ವಭಾಗದಲ್ಲಿ ಐತಿಹಾಸಿಕತೆಯನ್ನು ಪಡೆದುಕೊಂಡಂತಹ ಬಸದಿಯು ಎಲ್ಲರ ಕಣ್ಣು-ಮನಗಳನ್ನು ಕಂಗೊಳಿಸುತ್ತದೆ. ಈ ದೇವಾಲಯದಲ್ಲಿ (ಬಸದಿ) ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪ ಕಾಣಬಹುದಾಗಿದೆ. ಈ ಬಸದಿಯಲ್ಲಿರುವ ಮಹಾವೀರನ ಮುಖದಲ್ಲಿ ಶಾಂತಚಿತ್ತತೆಯನ್ನು ಕಾಣಬಹುದಾಗಿದೆ. ಈ ಜಿನನನ್ನು ರಟ್ಟದೊರೆ ನಾಲ್ಕನೆಯ ಕಾರ್ತವೀರ್ಯನ ಜನನ ತಾಯಿಯಾದ ಚಂದ್ರಿಕಾದೇವಿಯ ಆರಾಧನೆಯನ್ನು ಮಾಡುತ್ತಿದ್ದಳೆಂದು ನಮಗೆ ತಿಳಿದುಬರುತ್ತದೆ.[೨೪] ಈ ಬಸದಿಯನ್ನು ನಾಲ್ಕನೇ ಕಾರ್ತವೀರ್ಯನು ತನ್ನ ತಾಯಿಗಾಗಿಯೇ ಕಟ್ಟಿಸಿದ್ದಾನೆಂದೂ ತಿಳಿದುಬರುತ್ತದೆ. ಕುಂತನಬಾಗೆಯ ಪಟ್ಟಣದ ವಿಠ್ಠಲ ಮಂದಿರದಲ್ಲಿ ಚಾಲುಕ್ಯಶೈಲಿಯ ಮೂರ್ತಿಯು ಅಲಂಕಾರಗಳಿಂದ ಕೂಡಿದೆ. ಈ ಬಸದಿಯ ವಿಶಾಲವಾದ ಪ್ರಾಂಗಣದಲ್ಲಿ ಮಾಲಗಂಬ ನಿರ್ಮಿಸಲಾಗಿದ್ದು, ಅದರ ಶಿರೋಭಾಗದಲ್ಲಿ ಮಹಾವೀರನ ಚಿತ್ರಣವನ್ನು ಕಾಣಬಹುದಾಗಿದೆ. ಈ ಬಸದಿಯ ಅಧಿಷ್ಠಾನವು ಐದು ಪಟ್ಟಿಕೆಗಳಿಂದ ಕೂಡಿದೆ. ಈ ಬಸದಿಯ ನವರಂಗದಲ್ಲಿರುವ ಭುವನೇಶ್ವರಿಯಲ್ಲಿ ನಕ್ಷತ್ರಾಕಾರದ ಅಲಂಕಾರಯುಕ್ತವಾದ ಉಬ್ಬುಶಿಲ್ಪಗಳನ್ನು ನೋಡಬಹುದಾಗಿದೆ. ಬಸದಿಯ ಮುಂಭಾಗದಲ್ಲಿ ಮೇಲೆ ಹೋಗಲು ಸಾಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಈ ಬಸದಿಯನ್ನು ಮೇಲ್ಮಾಳಿಗೆಯನ್ನು ಪ್ರವೇಶಿಸಿದಾಗ ಒಂದು ಗಮನಾರ್ಹ ಸಂಗತಿ ತಿಳಿದುಬರುವುದೇನೆಂದರೆ, ಅಲ್ಲಿಯೂ ಕೂಡ ಮಹಾವೀರನ ಗರ್ಭಗೃಹದ ಮೇಲ್ಭಾಗದಲ್ಲಿರುವ ಇನ್ನೊಂದು ಗರ್ಭಗೃಹ ಶಿಖರ ನಿರ್ಮಾಣಗೊಂಡಿದ್ದು ವಿಶೇಷ. ಈ ದೃಷ್ಟಿಯಿಂದಲೇ ಚಾಲುಕ್ಯ ಶೈಲಿ ಎಲ್ಲ ರಾಜಕೀಯ ವಂಶಗಳ ವೈಶಿಷ್ಟ್ಯತೆ ಎನ್ನಬಹುದಾಗಿದೆ.

---

೨೩. ಸೂರ್ಯನಾಥ ಯು. ಕಾಮತ್ : ಪು. ೯೮.
೨೪. ಎಸ್.ಆಯ್.ಆಯ್. -೨೦, ಪು. ೭೫.

## ರಾಯಬಾಗ ತಾಲೂಕಿನ ಮೂರ್ತಿಶಿಲ್ಪಗಳು :

### ನಂದಿಕುರಳಿಯ ಶಿಲ್ಪಗಳು :

ದಕ್ಷಬ್ರಹ್ಮನ ಯಜ್ಞಕಾರ್ಯದಲ್ಲಿ ಭಾಗವಹಿಸಲು ಬಂದ ಪಾರ್ವತಿದೇವಿಯು ಇಲ್ಲಿಂದ ನಂದಿಯೇರಿ ಯಜ್ಞಮಂಟಪಕ್ಕೆ ಪ್ರಯಾಣಿಸಿದಳೆಂಬ ಪ್ರತೀತಿ ಇದೆ. ಅದಕ್ಕೆ ನಂದಿಗ್ರಾಮ ಎಂದು ಹೆಸರಾಯಿತು. ಪ್ರಾಚೀನ ದೇವಾಲಯಗಳಿರುವ ಕುರುಹುಗಳಿವೆ. ಗ್ರಾಮದ ದಕ್ಷಿಣಕ್ಕೆ ವಿಶಾಲವಾದ ಬಯಲಿನಲ್ಲಿ ಪೂರ್ವಾಭಿಮುಖವಾಗಿ ಸುಂದರವಾದ ಬಸವೇಶ್ವರ ದೇವಾಲಯವಿದೆ. ಲಿಂಗವಿದ್ದು ಪೀಠ ಉತ್ತರಾಭಿಮುಖವಾಗಿದೆ. ಸಭಾಮಂಟಪದಲ್ಲಿ ನಂದಿವಿಗ್ರಹವಿದೆ. ದೇವಾಲಯದ ಎದುರು ದೀಪಸ್ತಂಭವಿದೆ. ಕಟ್ಟೆಯ ಮೇಲೆ ಭಗ್ನಗೊಂಡ ನೀಲಿ ಬಳಪದ ಕಲ್ಲಿನ ಭಗ್ನ ನಂದಿ ವಿಗ್ರಹವಿದ್ದು ಒಂದು ವೀರಗಲ್ಲು ಮತ್ತು ಒಂದು ಮಾಸ್ತಿಗಲ್ಲು ಇದೆ. ಬಸವಜಯಂತಿಯಂದು ಜಾತ್ರೆ ನಡೆಯುತ್ತದೆ. ಇದು ೧೨ನೇಯ ಶತಮಾನದ ಶಿಲ್ಪವಾಗಿದೆ.

### ಭಿರಡಿ ಗ್ರಾಮದ ಶಿಲ್ಪಗಳು :

ರಾಯಬಾಗದಿಂದ ಏಳು ಕಿ.ಮೀ. ಉತ್ತರಕ್ಕೆ ಈ ಗ್ರಾಮವಿದ್ದು ಬೃಗು ಋಷಿಯಿಂದಾಗಿ ಈ ಗ್ರಾಮಕ್ಕೆ ಭಿರಡಿ ಎಂದು ಹೆಸರಾದ ಪ್ರತೀತಿ ಇದೆ. ರಾಮಮಂದಿರ, ಮಹಾದವಗುಡಿ ಹನುಮಾನ ಮಂದಿರಗಳಿದ್ದು ಶ್ರೀರಾಮ ಮಂದಿರ, ಮಹಾದೇವಗುಡಿ, ಹನುಮಾನ ಮಂದಿರಗಳಿದ್ದು ಶ್ರೀರಾಮ ಮಂದಿರದ ಶಿಲ್ಪಗಳು ಆಕರ್ಷಕವಾಗಿವೆ. ಪೂರ್ವಾಭಿಮುಖವಾಗಿ ನಿಂತ ಭಂಗಿಯ ೮೬ ಸೆಂ.ಮೀ. ಎತ್ತರ ೩೩ ಸೆಂ.ಮೀ. ಅಗಲದ ವಿಗ್ರಹವಿದೆ. ಪರಿವಾರ ದೇವತೆಗಳಾದ ಸೀತಾಮಾತೆ, ಭರತ, ಹನುಮಾನ, ಚಾಮರದಾರಣಿ, ಲಕ್ಷ್ಮಣ, ಗಣಪತಿ, ಲಿಂಗ ವಿಷ್ಣು ಪ್ರತಿಮೆಗಳಿವೆ. ಗ್ರಾಮದ ಮಧ್ಯಭಾಗದಲ್ಲಿ ಅಷ್ಟೇನೂ ಆಕರ್ಷಕವಲ್ಲದ ಸರಳ ವಾಸ್ತುವಿನ ದೇವಾಲಯವಿದೆ. ಗರ್ಭಗೃಹದ ಮೂರ್ತಿ ಮಾತ್ರ ಪ್ರಾಚೀನದ್ದಾಗಿದೆ.

ಸುಂದರವಾದ ಕಪ್ಪು ಕಲ್ಲಿನಲ್ಲಿ ನಿಂತ ಭಂಗಿಯ ಶ್ರೀರಾಮನ ವಿಗ್ರಹವಿದೆ. ಬಲಗೈ ಎತ್ತಿ ಅಂಬು ಹಿಡಿದಿದ್ದು ಎಡಗೈಯಲ್ಲಿ ಬಿಲ್ಲು ಇದೆ. ಕಿರೀಟಧಾರಿಯಾಗಿದ್ದು ಕೊರಳಲ್ಲಿ ಕಂಠಾಭರಣ, ಕರ್ಣಾಭರಣ, ಕಾಲ್ಗಡಗ, ಕೈಕಡಗಗಳಿದ್ದು ಸರ್ವಾಂಗಭೂಷಿತವಾಗಿದೆ.

ಚಾಲುಕ್ಯ ಶೈಲಿಯ ಸೀತಾಮಾತೆಯ ೭೪ ಸೆಂ.ಮೀ. ಎತ್ತರ ೨೮ ಸೆಂ.ಮೀ. ಅಗಲದ ನಿಂತಭಂಗಿಯ ಮಾದರಿಯ ನಿಂತ ಸರ್ವಾಂಗಭೂಷಿತ ಕಪ್ಪುಶಿಲೆಯ ವಿಗ್ರಹವಿದೆ. ಎಡಗೈ ಇಳಿಬಿಟ್ಟು ಬಲಗೈಯಲ್ಲಿ

ನೀಲೋತ್ಕಮಲವನ್ನು ಹಿಡಿದಿದ್ದಾಳೆ. ಸ್ವಲ್ಪ ಬಾಗಿದಂತಿದ್ದು, ಮುಕುಟಧಾರಿಣಿ, ಕರ್ಣಾಭರಣ, ನಡುಪಟ್ಟಿ, ಕಾಲ್ಗೆಜ್ಜೆಗಳುತ ಕೈಬಳೆ ಹಾಗೂ ತೋಳ್ಬಂದಿಗಳಿಂದ ಅಲಂಕೃತಗೊಂಡಿದೆ.

ಭರತನ ವಿಗ್ರಹ ಸೀತಾ ವಿಗ್ರಹದ ಎಡಗಡೆ ಇದ್ದು ನಿಂತ ಭಂಗಿಯ ಛತ್ರದಾರಿ ಭಂಗಿಯಲ್ಲಿದೆ. ೭೪ ಸೆಂ.ಮೀ. ಎತ್ತರ ೨೮ ಸೆಂ.ಮೀ. ಅಗಲ ಪ್ರತಿಮೆ ಆಕರ್ಷಕವಾಗಿದೆ.

ಛತ್ರಧಾರಣಿಯ ಎಡಗಡೆ ನಿಂತ ಭಂಗಿಯಲ್ಲಿರುವ ಸಾವಧಾನ ಸ್ಥಿತಿಯಲ್ಲಿ ಕೈಮುಗಿದು ನಿಂತ ಹನುಮಂತನ ಶಿಲ್ಪವಿದೆ. ಕಿರೀಟ, ಕರ್ಣಾಭರಣ, ಕಾಲ್ಗಡಗ, ಕೈಕಡಗಗಳಿವೆ. ಬಾಲ ಬಲಗಡೆಯಿಂದ ಮೇಲಕ್ಕೆ ಹಾಯ್ದು ಎಡಗಡೆಗೆ ಸುತ್ತಿದೆ. ವಿಗ್ರಹದ ಹಿಂದೆ ಸುಂದರವಾದ ಪ್ರಭಾವಳಿ ಇದೆ.

ಶ್ರೀರಾಮನ ಬಲಭಾಗದಲ್ಲಿ ವಿನೀತ ಭಾವದಿಂದ ಕೈಮುಗಿದು ನಿಂತ ಲಕ್ಷ್ಮಣನ ೮೧ ಸೆಂ.ಮೀ. ಎತ್ತರ ೨೬ ಸೆಂ.ಮೀ. ಅಗಲ ಅತ್ಯಂತ ಮನೋಹರವಾದ ಶಿಲ್ಪವಿದೆ. ಎಡಗಡೆ ಬೆನ್ನಿಗೆ ಬಾಣದಿಂದ ತುಂಬಿದ ಬತ್ತಳಿಕೆ ಇದೆ.

ಚಾಮರಧಾರಿಣಿ ಮೂರ್ತಿ ೭೪ ಸೆಂ.ಮೀ. ಎತ್ತರ ೨೮ ಸೆಂ.ಮೀ. ಅಗಲವಾದ ಲಕ್ಷ್ಮಣದ ಬಲಬದಿಗೆ ವಿಗ್ರಹವಿದೆ. ಎಡಗೈ ಸೊಂಟದ ಮೇಲಿದ್ದ ಬಲಗೈಯಲ್ಲಿ ಚಾಮರವಿದೆ.

ಚಾಮರಧಾರಿಯ ಬಲಗಡೆಗೆ ಕುಳಿತ ಭಂಗಿಯ ಚತುರ್ಭುಜದ ಗಣಪತಿಯ ವಿಗ್ರಹವಿದೆ. ಬಲಮುಂಗೈಯನ್ನು ಮುಷ್ಠಿ ಮಾಡಿದ್ದು ದಂಡಧಾರಿಯಾಗಿದ್ದಾನೆ. ಎಡಹಿಂಗೈಯಲ್ಲಿ ಬರ್ಚಿ ಹಿಡಿದು ಮತ್ತೊಂದರಲ್ಲಿ ಅಂಕುಶವಿದೆ. ಹಾಗೂ ಇನ್ನೊಂದು ಕೈಯಲ್ಲಿ ಉಂಡಿ ಇದ್ದು ಸೊಂಡಿಲಿನಿಂದ ತಿನ್ನುವ ಹಾಗೆ ಇದೆ. ಹೊಟ್ಟೆಗೆ ನಾಗಬಂಧವಿದೆ.

**ಶಯನ ವಿಷ್ಣುಮೂರ್ತಿ :**

ಹನುಮಂತನ ಎದುರಿಗೆ ೪೫ ಸೆಂ.ಮೀ. ಎತ್ತರದ ೧೩೦ ಸೆಂ.ಮೀ. ಅಗಲದ ಆದಿಶೇಷನ ಮೇಲೆ ಪವಡಿಸಿದ ವಿಷ್ಣು ವಿಗ್ರಹವಿದೆ. ಆದಿಶೇಷ ತನ್ನ ಹೆಡೆ ಬಿಚ್ಚಿ ಆಸರೆ ನೀಡಿದಂತಿದ್ದು ಶ್ರೀದೇವಿಯು ವಿಷ್ಣುವಿನ ಕಾಲೊತ್ತುವ ಪರಿಯಲ್ಲಿದ್ದರೆ ಭೂದೇವಿಯ ಬಲಗೈಯಲ್ಲಿ ಕಮಲ ಹಿಡಿದ ಭಂಗಿಯಲ್ಲಿದ್ದರೆ ಎಡಗೈ ವಿಷ್ಣುವಿನ ಪಾದ ಸ್ಪರ್ಶಿಸಿದೆ. ನಾಭಿಯಿಂದ ಕಮಲ ಎದ್ದಿದ್ದು ಕಮಲದಲ್ಲಿ ಚತುರ್ಮುಖ ಬ್ರಹ್ಮನಿದ್ದಾನೆ. ಪಾದದ ಬಳಿ ನಿಂತ ಭಂಗಿಯ ಗರುಡ ಶಿಲ್ಪ ಆಕರ್ಷಕವಾಗಿದೆ.

ಚಿಂಚಲಿ ಮಾಯಕ್ಕಾ ದೇವಸ್ಥಾನ ರಾಯಬಾಗದಿಂದ ೧೦ ಕಿ.ಮೀ. ಈಶಾನ್ಯಕ್ಕೆ ಕೃಷ್ಣಾ ತೀರದ ಸಮೃದ್ಧವಾದ ಗ್ರಾಮವಿದೆ. ಇಲ್ಲಿ ಚಿಂಚಲಿ ಮಾಯಕ್ಕಾ ಪ್ರಸಿದ್ಧ ಖ್ಯಾತಿಯ ದೇವಸ್ಥಾನವಾಗಿದೆ. ರಾಯಭಾಗದ೧೨೦೧ ರ ಶಾಸನದಲ್ಲಿ ಚಿಂಚಲಿ ಎಂದೇ ದಾಖಲಾಗಿದೆ. ೭೧ ಸೆಂ.ಮೀ. ಎತ್ತರ೬೪ ಸೆಂ.ಮೀ. ೬೪ ಸೆಂ.ಮೀ. ಅಗಲದ ಮಾಯಕ್ಕಾದೇವಿಯ ಕಪ್ಪುಶಿಲೆಯ ನಂತರದ ಚಾಲುಕ್ಯ ಶೈಲಿಯಲ್ಲಿರುವ ಮೂಲ ವಿಗ್ರಹವಿದೆ. ಕಿರೀಟಧಾರಿಣಿಯಾಗಿದ್ದು ಚತುರ್ಭುಜ ಹೊಂದಿದ್ದು, ಬಲಗಡೆ ಹಿಂಗೈಯಲ್ಲಿ ತ್ರಿಶೂಲ, ಚಕ್ರಗಳಿದ್ದು, ಬಲಮುಂಗೈಯಲ್ಲಿ ಖಡ್ಗವಿದೆ. ಎಡಮುಂಗೈಯಲ್ಲಿ ಬಟ್ಟಲು ಇದ್ದು ಎಡ ಮುಂಗೈಯಲ್ಲಿ ಚಕ್ರನಾಗರವಿದೆ. ಕಿರೀಟಧಾರಿಣಿಯಾಗಿದ್ದು ಕಂಠಾಭರಣ, ಕರ್ಣಾಭರಣ, ವಸ್ತ್ರಾಲಂಕಾರಗೊಂಡಿದ್ದ ಕೈಯಲ್ಲಿ ಬಳೆ, ಕಾಲಲ್ಲಿ ಗೆಜ್ಜೆಸರಗಳಿವೆ. ನಡುಪಟ್ಟಿ ಇರುವ ಸುಂದರ ಮೂರ್ತಿ ಇದಾಗಿದೆ.

ಹಿರೇದೇವಿ ವಿಗ್ರಹ ೩೩ ಸೆಂ.ಮೀ. ಎತ್ತರ ೧೮ ಸೆಂ.ಮೀ. ಅಗಲವಿದೆ. ಪೂರ್ವಾಭಿಮುಖವಾಗಿ ಕಪ್ಪುಶಿಲೆಯ ಪ್ರತಿಮೆ ಎರಡನೆಯ ಗರ್ಭಗೃಹದಲ್ಲಿದೆ. ಚತುರ್ಭುಜ ಹೊಂದಿದ್ದು, ಬಲಮುಂಗೈ ಖಡ್ಗ, ಹಿಂಗೈಯಲ್ಲಿ ಬಟ್ಟಲಿವೆ. ಎಡಹಿಂಗೈನಲ್ಲಿ ತ್ರಿಶೂಲವಿದ್ದು ಮುಂಗೈಯಲ್ಲಿ ಆಯುಧವಿದೆ. ರೌದ್ರಾವತಾರ ತಾಳಿದಂತಿದ್ದು ಅತಿ ಸುಂದರವಾಗಿದೆ.

ಅದೇ ರೀತಿಯಾಗಿ ದಿಗ್ಗೇವಾಡಿಯಲ್ಲಿಯೂ ಗಣಪತಿ, ಉಗ್ರನರಸಿಂಹ ಮತ್ತು ಲಕ್ಷ್ಮೀ ವಿಗ್ರಹಗಳಿದ್ದು ಗಣಪತಿ ಸಾಂಪ್ರದಾಯಕವಿದ್ದರೆ, ಉಗ್ರನರಸಿಂಹನ ವಿಗ್ರಹ ವಿಶೇಷವಾಗಿದೆ. ಕುಳಿತ ಭಂಗಿಯಲ್ಲಿರುವ ನರಸಿಂಹ ಚತುರ್ಭುಜವಾಗಿದ್ದು ತೊಡೆಯ ಮೇಲೆ ಹಿರಣ್ಯಕಷ್ಯಪುವಿನ ಹೊಟ್ಟೆ ಬಗಿದು ಕರುಳಬಳ್ಳಿ ಎತ್ತಿದ್ದು ಮಾಲೆಯ ಆಕಾರದಲ್ಲಿ ಮೇಲೆತ್ತಿದಂತಿದೆ. ಲಕ್ಷ್ಮೀ ವಿಗ್ರಹ ನಿಂತ ಭಂಗಿಯಲ್ಲಿದೆ. ಸರ್ವಾಂಗಭೂಷಿತವಾಗಿ ಸುಮಾರು ೧೨ ಅಥವಾ ೧೩ನೆಯ ಶತಮಾನದ ಆಕರ್ಷಕ ಶಿಲ್ಪಗಳಾಗಿವೆ.

ಈ ದಿಸೆಯಲ್ಲಿ ಕುಂತಣಬಾಗೆಯು ಆಕರ್ಷಕವಾಗಿ, ನೈಸರ್ಗಿಕವಾಗಿ ಸೌಂದರ್ಯದಿಂದ, ದೇವಾಲಯ, ಜಿನಾಲಯ ಮತ್ತು ಋಷಿ-ಮುನಿಗಳಿಂದ, ಕವಿವರ್ಯರಿಂದ ಪುನೀತವಾದ ಈ ನೆಲೆವೀಡು ನಿಜಕ್ಕೂ 'ಕೂಹೂಂಡಿ ಮಂಡಲಕ್ಕನುಪಮರತ್ನ'ವಾಗಿತ್ತೆಂದು ರಾಜಾದಿತ್ಯನ ಮಾತನ್ನು ಹುಸಿಗೊಳಿಸಿದೆ. ಅದನ್ನು ಉಳಿಸಿ ಬೆಳೆಸಿಕೊಂಡು ಬಂದದ್ದು ಅದರ ಜೀವಂತಿಕೆಗೆ ಒಂದು ನಿದರ್ಶನವಾಗಿದೆ. ಈ ಮೇಲಿನ ಎಲ್ಲ ಸಂಗತಿಗಳಿಂದ ಕುಂತನಬಾಗೆಯು ಇತಿಹಾಸದ ಪುಟಗಳಲ್ಲಿ ತನ್ನದೇಯಾದ ಅಚ್ಚನ್ನು ಮೂಡಿಸುವಲ್ಲಿ ಸಫಲತೆಯನ್ನು ಕಂಡಿದೆ.

## ಅಧ್ಯಾಯ : ಆರು

## ಉಪಸಂಹಾರ

'ಕೂಹುಂಡಿ ಮೂಸಾಸಿರ' ಸಂಸ್ಕೃತಿಯು ಒಟ್ಟು ಕರ್ನಾಟಕ ಸಂಸ್ಕೃತಿಗೆ ಹೊರತಾಗಿಲ್ಲ. ಪ್ರಾದೇಶಿಕತೆಯ ವೈವಿಧ್ಯತೆಗಳು ಕೂಡ ಕನ್ನಡ ನಾಡಿನ 'ಸಂಸ್ಕೃತಿ' ಎಂದು ಕರೆಯಿಸಿಕೊಳ್ಳುತ್ತದೆ. ಅದಕ್ಕಾಗಿ ಸಣ್ಣಪುಟ್ಟ ಪ್ರದೇಶಗಳನ್ನು ಲೆಕ್ಕಿಸದೇ ಎಲೆಗಳ ಮೇಲಿನ ಇಬ್ಬನಿಯ ಹನಿಯಲ್ಲಿ ಎಲ್ಲವೂ ಕಂಡಂತೆ, ಪ್ರಾದೇಶಿಕ ಅಧ್ಯಯನದಿಂದ ನಾಡಿನ ವಿವಿಧ ಬಗೆಯ ಸಂಸ್ಕೃತಿಯನ್ನು ಕಾಣಬಹುದು. ಆ ಒಂದು ನಿಟ್ಟಿನಲ್ಲಿ ಪ್ರಾದೇಶಿಕ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪ್ರಸ್ತುತ ಪ್ರಬಂಧವನ್ನು ಮಂಡಿಸಲಾಗಿದೆ. ಬಾದಾಮಿ ಚಲುಕ್ಯ, ಕಲ್ಯಾಣಿ ಚಾಳುಕ್ಯ, ಕಲಚೂರಿ, ರಟ್ಟರು ಹಾಗೂ ಮರಾಠರು ಇನ್ನಿತರ ಸಂಸ್ಥಾನಿಕರ ಕಾಲದಲ್ಲಿ ಕೂಹೂಂಡಿ ಮೂಸಾಸಿರದ ಭಾಗವಾಗಿದ್ದ ಕುಂತಣಬಾಗೆ (ಪೂವಿನಬಾಗೆ) ಒಂದು ಮಹಾಅಗ್ರಹಾರವಾಗಿ ಬೆಳೆದು ಬಂದದ್ದು ಇಂದು ಬಹುಜನರ ಗಮನಕ್ಕೆ ಬಾರದ ಒಂದು ಸಣ್ಣ ಪ್ರಾದೇಶಿಕ ಕೇಂದ್ರವಾಗಿದೆ.

ಈ ಹಿಂದೆ ಹೇಳಿರುವಂತೆ ಭಾರತ ದೇಶದ ದಕ್ಷಿಣಕ್ಕೆ ಇರುವ ಕೂಹುಂಡಿ ಮೂಸಾಸಿರ ಮಂಡಲವೆಂಬುದನ್ನು ಕ್ರಿ.ಶ.೯ನೆಯ ಶತಮಾನದಿಂದ೧೪ನೆಯ ಶತಮಾನದವರೆಗೆ ಹಲವಾರು ರಾಜಕೀಯ ಮನೆತನದ ಅರಸರು, ಸಾಮಂತರು, ಅಧಿಕಾರಿಗಳು ಆಳ್ವಿಕೆ ಮಾಡಿ ಜನರಿಂದ ಮಾನ್ಯತೆ ಪಡೆದುಕೊಂಡಿದ್ದರು. ಕೂಹುಂಡಿ ಮೂಸಾಸಿರಕ್ಕೆ ಸೀಮಿತಗೊಂಡ ಪೂವಿನಬಾಗೆ ಪ್ರದೇಶದಲ್ಲಿ ರಾಜಕೀಯ ದಕ್ಷ ಆಡಳಿತದಿಂದ ಆರ್ಥಿಕ ಕ್ಷೇತ್ರದಲ್ಲಿ ಪ್ರಗತಿ ತೋರಿ ಪರಿಣಾಮವಾಗಿ ಜನರು ನೆಮ್ಮದಿಯಿಂದ ಬಾಳುವಂತೆ ಮಾಡುವಲ್ಲಿ ಸಫಲರಾದರು.

ಕುಂತಣಬಾಗೆ ಪೂವಿನ ಬಾಗೆಯಲ್ಲಿ ಬದಾಮಿ ಚಳುಕ್ಯ, ಕಲ್ಯಾಣಿ ಚಾಳುಕ್ಯರ ಮತ್ತು ರಟ್ಟರ ಶಾಸನಗಳು ಹೆಚ್ಚಾಗಿ ದೊರೆತಿರುವುದರಿಂದ ಕುಂತಣಬಾಗೆ ಅವರ ಸಾಂಸ್ಕೃತಿಕ, ರಾಜಕೀಯ ಹಾಗೂ ಇತರ ಕ್ಷೇತ್ರಗಳಲ್ಲಿ ಪ್ರಮುಖವಾದ ಭಾಗವಾಗಿತ್ತು ಎಂದು ತಿಳಿದುಬರುವುದು. ಅದರಂತೆ ಕುಂತಣಬಾಗೆ (ಪೂವಿನಬಾಗ)ವು ಕ್ರಿ.ಶ. ೯೭೩ ರಿಂದ ಕ್ರಿ.ಶ. ೧೧೮೦ ರವರೆಗೆ ಕಲ್ಯಾಣಿ ಚಳುಕ್ಯರ ಆಳ್ವಿಕೆಗೆ ಒಳಪಟ್ಟಿತು. ಅದರಂತೆ ಕಲ್ಯಾಣಿ ಚಾಳುಕ್ಯರ ದೊರೆ ಆರನೆಯ ವಿಕ್ರಮಾದಿತ್ಯ(ತ್ರಿಭುವನಮಲ್ಲ)ನ ಕಾಲ(ಕ್ರಿ.ಶ. ೧೦೭೬-೧೧೨೭)ದ ಕುಂತಣಬಾಗೆ (ಪೂವಿನಬಾಗೆ)ಯ ಶಾಸನ ಒಂದು ವಿಕ್ರಮಾದಿತ್ಯನ ಗಜದಳದ

ದಂಡಾಧಿಕಾರಿ (ಮಹಾಸೇನಾಪತಿ) ಚಂಡಾರಸನು ಉತ್ತರ ಭಾರತದ ಪಾರಮಾರದ ದೊರೆ ಭೋಜನ ಗಜದಳವನ್ನು ನಾಶ ಮಾಡಿದ ಕುರಿತು ಕ್ರಿ.ಶ. ೧೦೮೯ ರ ವರದಿಯಲ್ಲಿ ಇದು ಉಲ್ಲೇಖವಾಗುತ್ತದೆ. ಆರನೇ ವಿಕ್ರಮಾದಿತ್ಯನು ಮಾಳವ ಪ್ರಾಂತ್ಯದ ಮೇಲೆ ದಾಳಿ ಮಾಡಿ ಅವರನ್ನು ಸೋಲಿಸಿ ಅವರ ರಾಜಧಾನಿ (ಪಾರಮಾರ) ಯಾದ 'ಧಾರ' ಪಟ್ಟಣವನ್ನು ಸುಟ್ಟು ಅಲ್ಲಿ ವಿಜಯಸ್ಥಂಭವನ್ನು ನೆಟ್ಟಿಸಿದನೆಂದು ಶಾಸನದಿಂದ ಗೋಚರವಾಗುತ್ತದೆ. ಇದರಿಂದ ಆ ಕಾಲದಲ್ಲಿ ಕುಂತಣಬಾಗೆ (ಪೂವಿನಬಾಗೆ) ಎಷ್ಟು ಪ್ರಾಮುಖ್ಯತೆಯನ್ನು ಪಡೆದಿತ್ತು ಎಂದು ತಿಳಿದುಬರುವುದು.

ಈ ಪ್ರದೇಶದಲ್ಲಿ ಶೈವ, ವೈಷ್ಣವ, ಗಾಣಪತ್ಯ, ಜೈನ ಬಸದಿಗಳು ಅಧಿಕವಾಗಿದ್ದಂತೆ ತಿಳಿದುಬರುತ್ತದೆ. ಇದರಿಂದ ಸರ್ವಧರ್ಮಕ್ಕೆ ಸಮಾನ ರೀತಿಯ ಅವಕಾಶವಿತ್ತೆಂದು ಗೋಚರಿಸುತ್ತದೆ. ರಾಜನೇ ಸ್ವತಂತ್ರ (ಸರ್ವತಂತ್ರ) ಸರ್ವಾಧಿಕಾರಿ. ಈ ಮಾತು ನಿಜವಾದರೆ ಕಾರ್ಯಗತ ಮಾಡಲು ಇದಕ್ಕೆ ಕೆಲವು ಅಡಚಣೆಗಳಿದ್ದವು. ಯುದ್ಧರಂಗದಲ್ಲಿ ಶೌರ್ಯದಿಂದ ಹೋರಾಡಬೇಕು, ದುರ್ಬಲರಿಗೆ ರಕ್ಷಣೆ ನೀಡಬೇಕು, ಪರನಾರಿ ಸಹೋದರರಂತೆ ನಡೆದುಕೊಳ್ಳಬೇಕು, ತಾರಕಮಂತ್ರ ಪಾಲಿಸಬೇಕು ಎಂಬ ಧ್ಯೇಯವುಳ್ಳವರಾಗಿದ್ದರು.

ಬೇಸಾಯವೇ ಬೆನ್ನೆಲುಬಾಗಿದ್ದ ನಾಡಿನಲ್ಲಿ ಫಲವತ್ತಾದ ಭೂಮಿಯಿಂದ ಹುಲುಸಾದ ಬೆಳೆಯನ್ನು ತೆಗೆಯುತ್ತಿದ್ದರು. ವ್ಯಾಪಾರಿಗಳು ತಮ್ಮದೇ ಆದ ಸಂಘ ಕಟ್ಟಿಕೊಂಡು ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ಆಸಕ್ತಿ ಹೊಂದಿದ್ದರು.

ಒಂದು ನಾಡಿನ ಇತಿಹಾಸದುದ್ದಕ್ಕೂ ಧರ್ಮದ ಪಾಲು ಶ್ರೇಷ್ಠವಾದದ್ದು. ಧರ್ಮರಹಿತ ಸಮಾಜವನ್ನು ಇತಿಹಾಸ ಇದುವರೆಗೆ ಕಡೆಗಣಿಸಿಲ್ಲ. ಪ್ರಸ್ತುತ ಅಧ್ಯಯನದ ಕ್ಷೇತ್ರವಾದ ಕುಂತಣಬಾಗೆ (ಪೂವಿನಬಾಗೆ) ಪ್ರದೇಶದಲ್ಲಿ ಎಲ್ಲ ಧರ್ಮಗಳು ಬಹುಮಟ್ಟಿಗೆ ಸ್ಥಾನಮಾನ-ಗೌರವವನ್ನು ಹೊಂದಿ ಪ್ರಚಲಿತದಲ್ಲಿದ್ದವು ಎಂದು ಮನಗಾಣಬಹುದಾಗಿದೆ.

ವಾಸ್ತುಶಿಲ್ಪಕಲೆಗೆ ಸಂಬಂಧಿಸಿದಂತೆ ಕರ್ನಾಟಕ ಹಲವು ವೈಶಿಷ್ಟ್ಯಗಳನ್ನು ಕುಂತಣಬಾಗೆ (ಪೂವಿನಬಾಗೆ) ಈ ಪ್ರದೇಶವು ಮೈಗೂಡಿಸಿಕೊಂಡು ಬಂದಿದೆ. ಕರ್ನಾಟಕದ ವಾಸ್ತುಶಿಲ್ಪ ಜಗತ್ತಿಗೆ ತನ್ನದೇ ಆದ ಅಪೂರ್ವ ಕಾಣಿಕೆಯನ್ನು ಸಲ್ಲಿಸಿದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಇಲ್ಲಿಯ

ದೇವಾಲಯಗಳು ತಮ್ಮ ದೇಯಾದ ಒಂದು ವಿಶಿಷ್ಟ ಬಗೆಯ ಶೈಲಿಯನ್ನು ಬೆಳೆಸಿಕೊಂಡು ಬಂದಿರುವುದರಿಂದ ಇತಿಹಾಸದ ಪುಟಗಳಲ್ಲಿ ಗುರುತಿಸುವಂತಾಗಿದೆ.

ಸಾಮಾನ್ಯವಾಗಿ ದೇವಾಲಯಗಳು ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ ಹೊಂದಿದೆ. ಗರ್ಭಗೃಹಗಳು ಚೌಕಾಕಾರವಾಗಿದ್ದು ಪ್ರಬಂಧದ ವ್ಯಾಪ್ತಿಗೆ ಸಂಬಂಧಿಸಿದಂತೆ ಮಧ್ಯದಲ್ಲಿ ನಂದಿ ವಿಗ್ರಹಗಳ ಜೊತೆಗೆ ಅಲಂಕೃತವುಳ್ಳ ಚಿತ್ರಣಗಳನ್ನು ಕಾಣಬಹುದು. ನವರಂಗಗಳು ದೇವಾಲಯಗಳಿಗೆ ತಕ್ಕಂತೆ ಕಂಡುಬರುತ್ತದೆ. ಕೆಲವು ತೆರೆದ ನವರಂಗಗಳಂತೆಯಿದ್ದು ಹೆಚ್ಚು ಕಡಿಮೆ ಸಂಖ್ಯೆಯಲ್ಲಿ ಚೌಕಾಕಾರದ ಕಂಬಗಳನ್ನು ಹೊಂದಿವೆ.

ದೇವಾಲಯಗಳ ಹೊರಮೈ ಭಿತ್ತಿಯು ಸಾದಾ ಇಲ್ಲವೇ ಅಲಂಕೃತವಾಗಿ ಕಂಡುಬರುವಂತೆ ಕೋಷ್ಠ, ಅರ್ಧಕಂಬಗಳು ಉಬ್ಬುಶಿಲ್ಪಗಳು, ಕೋಷ್ಠದ ಪಂಜರ ಇತ್ಯಾದಿ ರೀತಿಯ ಅಧಿಷ್ಠಾನದ ಹಿಂಬದಿ, ಮುಂಬದಿಗಳಿಂದ ಅಲಂಕಾರಗೊಂಡಿವೆ.

ಪ್ರಬಂಧದ ಎಲ್ಲ ಅಧ್ಯಾಯಗಳ ರಚನೆಯಲ್ಲಿ ಉಪಲಬ್ಧವಿರುವ ಆಕರ-ಸಾಮಗ್ರಿಗಳ ಮೂಲಕ ಅದರಲ್ಲೂ ವಿಶೇಷವಾಗಿ ಶಾಸನ, ದೇವಾಲಯಗಳ ಹಾಗೂ ಸಾಹಿತ್ಯಿಕ ಕೃತಿಗಳ ಸಹಾಯದಿಂದ ವೈಭವದಿಂದ ಮೆರೆದ ಕುಂತಣಬಾಗೆ (ಪೂವಿನಬಾಗೆ) ಯ ಸಾಂಸ್ಕೃತಿಕ ಜೀವನದ ವಿವಿಧ ಮಜಲುಗಳನ್ನು ಪರಿಚಯಿಸುವ ಒಂದು ಪ್ರಾಮಾಣಿಕ ಪ್ರಯತ್ನ ಇದಾಗಿದೆ. ಕಾಲಗರ್ಭದಲ್ಲಿ ಅದೆಷ್ಟೋ ಮಹತ್ವದ ವಿಷಯಗಳು ಮರೆಮಾಚಿರುವುದರಿಂದ ಇತಿಹಾಸದ ಸಮಗ್ರ ಪುನಾರಚನೆ ಕಷ್ಟಸಾಧ್ಯವಾಗಿದೆ.

''ಒಟ್ಟಾರೆ ಕುಂತಣಬಾಗೆ(ಪೂವಿನಬಾಗೆ) ಒಂದು ಸಾಂಸ್ಕೃತಿಕ ಅಧ್ಯಯನ'' ಎಂಬ ಈ ಪ್ರಬಂಧ ಸಾಂಸ್ಕೃತಿಕ ಚರಿತ್ರೆಯಲ್ಲಿ ಪ್ರಮುಖ ಸಹಾಯಕಾರಿ ಗ್ರಂಥವಾಗಿ ಬಳಕೆಯಾಗಲಿದೆಯೆಂಬ ಉದ್ದೇಶವನ್ನು ಒಳಗೊಂಡಿದೆ.

ಹೀಗಿದ್ದರೂ ಕರ್ನಾಟಕದ ಅವಿಭಾಜ್ಯ ಅಂಗವಾಗಿ ಕೂಹುಂಡಿ ಮೂಸಾಸಿರ ಕರ್ನಾಟಕದ ಚರಿತ್ರೆಯ ಎಲ್ಲ ಮಗ್ಗಲುಗಳನ್ನು ಅಳವಡಿಸಿಕೊಂಡು ಸಮನ್ವಯ ಭೂಮಿಯಾಗಿ ಮರದ ಕುಂತಣಬಾಗೆ (ಪೂವಿನಬಾಗೆ) ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಅದೇ ನಿಟ್ಟಿನಲ್ಲಿ ಪ್ರಾಮುಖ್ಯತೆ ಪಡೆದ ಐತಿಹಾಸಿಕ

ನೆಲೆಯಾಗಿತ್ತು ಎಂಬುದರ ಸಂಕ್ಷಿಪ್ತ ಚಿತ್ರಣವೊಂದನ್ನು ಹಿಡಿದಿಡಲು ಮಾರ್ಗದರ್ಶಕರ ಪ್ರೋತ್ಸಾಹದೊಂದಿಗೆ ಪ್ರಯತ್ನಿಸಿದ್ದೇನೆ. ಈ ಪ್ರಬಂಧ ಹೊಸ ಹೊಸ ವಿಚಾರಗಳಿಂದ ಕೂಡಿದರೂ ಸಹ ಇದುವೇ ಸಂಶೋಧನೆಯ ಅಂತಿಮ ಘಟ್ಟದಲ್ಲಿ ಇನ್ನೂ ಹೆಚ್ಚಿನ ರೀತಿಯಲ್ಲಿ ಅಧ್ಯಯನ ಮಾಡಬೇಕಾದದ್ದು ಸಾಕಷ್ಟಿದೆ. ಈ ಒಂದು ದಿಸೆಯಲ್ಲಿ ಹೆಚ್ಚಿನ ಸಂಶೋಧನೆಗಳನ್ನು ಮಾಡುವ ಸಾಧ್ಯತೆಯನ್ನು ಸೂಚಿಸಲಾಗಿದೆ.





ಸಿದ್ಧೇಶ್ವರ ದೇವಾಲಯದ ಗರ್ಭಗೃಹ



ಸಿದ್ಧೇಶ್ವರ ದೇವಾಲಯದ ನವರಂಗದಲ್ಲಿರುವ ನಂದಿ ವಿಗ್ರಹ



ಸಿದ್ಧೇಶ್ವರ ದೇವಾಲಯದ ಹೊರನೋಟ





ಸಿದ್ಧೇಶ್ವರ ದೇವಾಲಯದ ನವರಂಗದ ದೇವಕೋಷ್ಠಗಳಲ್ಲಿರುವ ಗಣಪತಿ ಮತ್ತು ನಾಗ ಶಿಲ್ಪಗಳು



ಬಂಕನಾಥ ದೇವಾಲಯದ ಪ್ರವೇಶದ್ವಾರ



ಬಂಕನಾಥ ದೇವಾಲಯದ ಅರ್ಚಕರೊಂದಿಗೆ ದೇವಾಲಯದ ಹೊರನೋಟ



ಬಂಕನಾಥ ದೇವಾಲಯದ ನವರಂಗ



ಬಂಕನಾಥ ದೇವಾಲಯದ ಎಡಭಾಗದಲಿ ರುವ ಶಾಸನ



ಬಂಕನಾಥ ದೇವಾಲಯ ದೇವಕೋಷ್ಠದಲ್ಲಿ ರುವ ಗಣಪತಿ ಶಿಲ



ಸೋಮನಾಥ ದೇವಾಲಯದ ಹೊರನೋಟ



ಸೋಮನಾಥ ದೇವಾಲಯದ ಗರ್ಭಗೃಹದ ನೋಟ



ಸೋಮನಾಥ ದೇವಾಲಯದ ನವರಂಗದಲ್ಲಿರುವ ನಂದಿಶಿಲ



ಪಾರ್ಶ್ವನಾಥ ಬಸದಿಯ ಬಲಭಾಗದಲ್ಲಿರುವ
ಕ್ರಿ.ಶ. ೧೦೪೧ ರ ಶಾಸನ



ಪಾರ್ಶ್ವನಾಥ ಬಸದಿಯ ಎದುರಿಗಿರುವ ಮಾನಸ್ಥಂಭ



ಪಾರ್ಶ್ವನಾಥ ಬಸದಿಯ ಆವರಣದಲ್ಲಿರುವ ಪಂಜಕೋಷ್ಠಕ



ರ್ಶ್ವನಾಥ ಬಸದಿಯ ಗರ್ಭಗೃಹದಲ್ಲಿರುವ ಪಾರ್ಶ್ವನಾಥ ಶಿಲ್ಪ



ಪಾರ್ಶ್ವನಾಥ ಬಸದಿಯ ಮುಖಮಂಟಪದಲ್ಲಿರುವ ಸ್ತಂಭಗಳು



ಮಹಾವೀರ ಬಸದಿಯ ಹೋರನೋಟ
ದಕ್ಷಿಣಾಭಿಮುಖವಾಗಿ




ಮಹಾವೀರ ಮೂಲ ಬಸದಿ



ಗರ್ಭಗೃಹದಲ್ಲಿರುವ ಮಹಾವೀರ ಶಿಲ್ಪ



ಮಹಾವೀರ ಬಸದಿಯ ಹೊರಭಾಗದಲ್ಲಿರುವ



ಮಹಾವೀರ ಬಸದಿಯ ಆವರಣದಲ್ಲಿರುವ ಕೋಷ್ಠ ಕಮಂಜ



ಹುಕ್ಕೇರಿನ ಫೀರನ ದರ್ಗಾದ ಹೊರನೋಟ



ದರ್ಗಾದ ಗುಮ್ಮಟ ನೋಟ



ಲಂಗೋಟಿವಾಲಾ ದರ್ಗಾದ ಪ್ರವೇಶದ್ವಾರ



ಲಂಗೋಟಿವಾಲಾ ದರ್ಗಾದ ಹೊರನೋಟ



ಲಂಗೋಟಿವಾಲಾ ದರ್ಗಾದಲ್ಲಿ
ಪ್ರತಿಷ್ಠಾಪನೆಗೊಂಡ ಬಾಬಾ



ಲಂಗೋಟಿವಾಲಾ ದರ್ಗಾದ
ಎಡಭಾಗದ ನೋಟ

# ಬೆಳಗಾವಿ ಜಿಲ್ಲೆ



# ರಾಯಬಾಗ ತಾಲೂಕು

ಅಥಣಿ ತಾಲೂಕು
ಸಾಂಗಲಿಜಿಲ್ಲ
ಕೃಷ್ಣಾನದಿ
ಜಮಖಂಡಿ ತಾಲೂಕು
ಅ
ಸೌಂದತ್ತಿ
ಚಿಂಚಲಿ
ಕ
ರಾಯಬಾಗ
ಆಲಕನೂರು
ಬ
ಚಿಕ್ಕೋಡಿ ತಾಲೂಕು
ಮುಗಳಖೇಡ
ಬೊಮ್ಮನಾಳ
ಮುಧೋಳ ತಾಲೂಕು
ಗೋಕಾಕ ತಾಲೂಕು
ಹುಕ್ಕೇರಿ ತಾಲೂಕು

ಅ. ಅಂಕಲಿಯಿಂದ ಬಂದ ರಾಜಮಾರ್ಗ

ಬ. ಸ್ಟೇಶನಕ್ಕೆ ಹೋದ ರಾಜಮಾರ್ಗ

ಕ. ಚಿಂಚಲಿಗೆ ಹೋದ ರಾಜಮಾರ್ಗ

# ಸಹಾಯಕ ಗ್ರಂಥಗಳು


| ಲೇಖಕರು | ಪ್ರಕಟಣಾ ವರ್ಷ | ಗ್ರಂಥ ಹಾಗೂ ಪ್ರಕಾಶಕರು |
|---|---|---|
| ಅಣ್ಣಿಗೇರಿ, ಎ.ಎಮ್. | ೧೯೮೫, | ಕರ್ನಾಟಕ ಇತಿಹಾಸ ಸಂಶೋಧಕರು<br>ಮೈಸೂರು. |
| ಎಲಿಗಾರ ಚೆನ್ನಕ್ಕ | ೧೯೯೦, | ಶಾಸನದಲ್ಲಿ ಕರ್ನಾಟಕದ ಸ್ತ್ರೀಸಮಾಜ<br>ಧಾರವಾಡ. |
| ಕಲಬುರ್ಗಿ, ಎಂ.ಎಂ. | ೧೯೮೦, | ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು<br>ಬೆಂಗಳೂರು. |
| ಕೃಷ್ಣಾಶಾಸ್ತ್ರಿ, ರಾವ್‌ಬಹದ್ದೂರ್ | ೧೯೮೩, | ಎಪಿಗ್ರಾಫಿಯಾ ಇಂಡಿಕಾ, ಸಂಪುಟ-೮,<br>ನವದೆಹಲಿ. |
| | ೧೯೭೫, | ಸರ್ವೆ ಆಫ್ ಇಂಡಿಯಾ<br>ಜಾನಪಥ್, ದೆಹಲಿ. |
| ಕಾಮತ, ಸೂರ್ಯನಾಥ. ಎಸ್. | ೧೯೮೭, | ಬೆಳಗಾವ ಜಿಲ್ಲಾ ಗೆಜೆಟಿಯರ್<br>ಬೆಂಗಳೂರು. |
| ಕುಂದಣಗಾರ.ಕೆ.ಜಿ. | ೧೯೩೯, | ಇನ್‌ಸ್ಕ್ರಿಪ್ಷನ್ಸ್ ಇನ್ ನಾರ್ಥನ್ ಮತ್ತು ಕೊಲ್ಲಾಪುರ ಸ್ಟೇಟ್<br>ಕೊಲ್ಲಾಪುರ. |
| ಚಿದಾನಂದಮೂರ್ತಿ.ಎಂ. | ೧೯೬೬, | ಶಾಸನಗಳ ಸಾಂಸ್ಕೃತಿಕ ಅಧ್ಯಯನ<br>ಮೈಸೂರು. |
| | ೧೯೬೭ | ಸಂಶೋಧನೆ<br>ಮೈಸೂರು. |
| ಜೋಶಿ ಮಹಾದೇವ | ೧೯೮೯, | ಸಾಮಾಜಿಕ ವಿಜ್ಞಾನಗಳಲ್ಲಿ ಸಂಶೋಧನೆ<br>ಧಾರವಾಡ. |
| ತಿಪ್ಪೇರುದ್ರಸ್ವಾಮಿ | ೧೯೯೭, | ಕರ್ನಾಟಕ ಸಂಸ್ಕೃತಿ ಸಮೀಕ್ಷೆ<br>ಮೈಸೂರು. |
| ದೇಸಿಸರ್ಕಾರ್ | ೧೯೬೫, | ಇಂಡಿಯನ್ ಎಪಿಗ್ರಾಫಿ ಮಟೀರಿಯಲ್<br>ಬನಾರಸ್. |
| ದೇಸಾಯಿ, ಪಿ.ಬಿ. | ೧೯೮೭, | ಕನ್ನಡ ನಾಡಿನ ಶಾಸನಗಳು<br>ಧಾರವಾಡ. |
| ನಾಗಯ್ಯ, ಜೆ.ಎಂ. | ೧೯೯೯, | ೬ನೇ ವಿಕ್ರಮಾದಿತ್ಯನ ಕಾಲದ ಶಾಸನಗಳು<br>ಬೆಳಗಾವಿ. |

ಪಂಚಮುಖಿ, ಆರ್.ಎಸ್. ೧೯೮೧, ಕರ್ನಾಟಕದ ಶಾಸನಗಳು
ಕನ್ನಡ ಸಂಶೋಧನ ಸಂಸ್ಥೆ, ಕೆ.ಯು. ಧಾರವಾಡ.

ಪಾಟೀಲ, ಶಿ.ಬಾ. ೧೯೯೫, ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ
ಸಂಕೇಶ್ವರ.

ಪಾಟೀಲ, ಮನೋಜ ೧೯೮೭, ಬೆಳಗಾಂವ ಜಿಲ್ಲಾ ಮಾರ್ಗದರ್ಶಿ
ಬೆಳಗಾಂವ.

ಪಾಡಿಗಾರ, ಎಸ್.ವ್ಹಿ. ೧೯೯೭, ಪುರಾತತ್ವ ಪರಿಚಯ
ಧಾರವಾಡ.

ಬಾ.ರಾ.ಗೋಪಾಲ ೧೯೯೫, ಕನ್ನಡ ಶಾಸನಗಳು
ಬೆಂಗಳೂರು.

೧೯೬೯, ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್ ಸಿರೀಜ, ಸಂಪುಟ-೫
ಕನ್ನಡ ಸಂಶೋಧನ ಸಂಸ್ಥೆ, ಕೆ.ಯು.ಧಾರವಾಡ.

ರಮೇಶ, ಕೆ.ವಿ. ೧೯೮೪, ಇಂಡಿಯನ್ ಎಪಿಗ್ರಾಫಿ ಸಂಪುಟ-೧
ದೆಹಲಿ.

ರಾವ್, ಎಸ್.ಆರ್. (ಅನು.) ಎಸ್.ಗುರುರಾಜಾಚಾರ್ಯ ೧೯೯೯, ಲೋಥಲ್ ಮತ್ತು ಸಿಂಧೂ ನಾಗರಿಕತೆ
ಧಾರವಾಡ.

ವಸಿಷ್ಠ (ಸಿ.ಪಿ.ಕೆ.) ೧೯೯೩, ಶಾಸನಶಾಸ್ತ್ರ
ಮೈಸೂರು.

ಸುಂಕದ, ಆರ್.ಎಸ್. ೧೯೭೭, ಕನ್ನಡ ಸಾಹಿತ್ಯ ಸಂಸ್ಕೃತಿ ದರ್ಶನ
ಧಾರವಾಡ.

ಶಿರೂರ, ಬಿ.ವಿ. ೧೯೯೨, ಸಂಶೋಧನ ಸ್ವರೂಪ
ಹುಬ್ಬಳ್ಳಿ.

ಶ್ರೀಕಂಠಶಾಸ್ತ್ರಿ ಎಸ್. ೧೯೭೫, ಪುರಾತತ್ವ ಶೋಧನೆ
ಮೈಸೂರು.

ಹಿರೇಮಠ, ಬಿ.ಆರ್. ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು
ಧಾರವಾಡ.

